ರಮಪೂಜ್ಯ ಶ್ರೀ ಶ್ರೀಗಳವರಿಗೆ ಅರ್ಪಣೆ.

# ಸಿದ್ಧಗಂಗಾ

ಸಂಪುಟ–27 ಸಂಚಿಕೆ–4 ಏಪ್ರಿಲ್–1991

ಮತ (ವೋಟು) ಅತ್ಯಂತ ಪವಿತ್ರವಾದ ರತ್ನ; ಬೆಲೆ ಕಟ್ಟಲಾಗದ ಮಾಣಿಕ್ಯ. ಪ್ರಜಾಪ್ರಭುತ್ವದಲ್ಲಿ ಪ್ರಜೆಗೆ ಪ್ರಾಪ್ತವಾಗಿರುವ ಅಮೂಲ್ಯ ಭಾಗ್ಯ. ಅದನ್ನು ಸತ್ಪಾತ್ರರಿಗೆ ನೀಡಿದಾಗ ಮಾತ್ರ ಅದಕ್ಕೆ ಶೋಭೆ ಸಲ್ಲುತ್ತದೆ. ರಾಷ್ಟ್ರಕ್ಕೆ ಯೋಗ್ಯ ಸೇವೆಯನ್ನು ಸಲ್ಲಿಸಿದಂತಾಗುತ್ತದೆ. ರಾಷ್ಟ್ರದ ನೀತಿಯನ್ನು ರೂಪಿಸಲು, ಪ್ರಗತಿಯನ್ನು ನಿರೀಕ್ಷಿಸಲು, ಭವಿಷ್ಯವನ್ನು ನಿರ್ಮಾಣಮಾಡಲು ಇರುವ ಏಕೈಕ ಸಂಜೀವಿನಿ ವೋಟು. ಅಂಥ ಪವಿತ್ರವಾದ ಮತವನ್ನು ಭ್ರಷ್ಟರಿಗೆ, ಅನೈತಿಕ ಮಾರ್ಗಾನುಯಾಯಿಗಳಿಗೆ, ಸ್ವಾರ್ಥಿಗಳಿಗೆ, ಹಣಕ್ಕೆ, ಆಮಿಷಕ್ಕೆ ಮಾರಿಕೊಳ್ಳುವುದು ದೇಶದ್ರೋಹ, ಧರ್ಮದ್ರೋಹ, ದೈವದ್ರೋಹ, ಅದಕ್ಕಿಂತ ಘೋರವಾದ ಪಾಪ ಮತ್ತೊಂದಿರಲಾರದು.

— ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ
ಸಿದ್ಧಗಂಗಾ ಕ್ಷೇತ್ರ.

॥ ಗುರು ಬಸವಲಿಂಗಾಯ ನಮಃ ॥

**ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.**

# ಶ್ರೀ ಶ್ರೀಗಳವರ ಜನ್ಮ ದಿನಾಚರಣೆ ಸಮಾರಂಭ.

**ದಿನಾಂಕ : 28-4-91 ನೇ ಭಾನುವಾರ - ಪ್ರಾತಃ ಕಾಲ 10 ಘಂಟೆಗೆ**

**ಪರಮ ಪೂಜ್ಯ ತ್ರಿವಿಧ ದಾಸೋಹ ಮೂರ್ತಿ ಶಿವಯೋಗಿ**

**ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 84 ನೇ**

**ಜನ್ಮ ದಿನಾಚರಣೆ ಮಹೋತ್ಸವಕ್ಕೆ**

**ತಮಗೆಲ್ಲ ಸುಸ್ವಾಗತ.**

ಸಮಾರಂಭದ ಅಧ್ಯಕ್ಷತೆ : ಪರಮ ಪೂಜ್ಯ ಜಗದ್ಗುರು ಶ್ರೀ ತೋಂಟದಾರ್ಯ
**ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು,**
ಡಂಬಳ-ಗದಗ, ಧಾರವಾಡ ಜಿಲ್ಲೆ.

ಉದ್ಘಾಟನೆ : **ಶ್ರೀ ವೀರೇಂದ್ರ ಹೆಗ್ಗಡೆ,**
ಧರ್ಮಾಧಿಕಾರಿಗಳು, ಧರ್ಮಸ್ಥಳ.

ಮುಖ್ಯ ಅತಿಥಿಗಳು : **ಶ್ರೀಮತಿ ಕೆ. ಎಸ್. ನಾಗರತ್ನಮ್ಮ,**
ಆರೋಗ್ಯ ಸಚಿವೆ, ಕರ್ನಾಟಕ ಸರ್ಕಾರ.

**ಶ್ರೀ ಮಲ್ಲಿಕಾರ್ಜುನ ಪ್ರಸನ್ನ,**
ಸಣ್ಣ ನೀರಾವರಿ ರಾಜ್ಯ ಸಚಿವರು, ಕರ್ನಾಟಕ ಸರ್ಕಾರ

ಸನ್ಮಾನ : **ಪದ್ಮಶ್ರೀ ಡಾ॥ ಎಂ. ಸಿ. ಮೋದಿ,**
**ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯ,**
**ಡಾ॥ ಶ್ರೀ ದೇ. ಜವರೇಗೌಡ,**
**ಶ್ರೀ ಹೆಚ್.ಎಂ. ಗಂಗಾಧರಯ್ಯ,**
[redacted],
**ಇವರುಗಳಿಗೆ.**

ಅನೇಕ ಅನುಭಾವಿ ವಿದ್ವಾಂಸರುಗಳಿಂದ ಉಪನ್ಯಾಸ.
ಶ್ರೀಮಠದ ಭಕ್ತಾದಿಗಳಿಗೆ, ಅಭಿಮಾನಿಗಳಿಗೆ, ಹಿತೈಷಿಗಳಿಗೆ, ಹಳೆಯ ವಿದ್ಯಾರ್ಥಿಗಳಿಗೆ
ಹೃತ್ಪೂರ್ವಕ ಆಹ್ವಾನ.

ಬನ್ನಿ, ಈ ಗುರುವಂದನ ಕಾರ್ಯಕ್ರಮದಲ್ಲಿ ಭಾಗಿಗಳಾಗಿ, ತಮಗೆ ಸುಸ್ವಾಗತ.

# ಸಿದ್ಧಗಂಗಾ

ಸಂಪುಟ–27. ಸಂಚಿಕೆ–4. ಏಪ್ರಿಲ್ – 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸತ್ಯ ಲೋಕದ ಶಿವನೆ ಮರ್ತ್ಯಲೋಕದ ಬೆಳಕೆ
ಮರ್ತ್ಯ ಸತ್ಯವ ಬೆಸೆದ ನಿಜಗುಣವೇ। ಪ್ರೊರಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಾಯ ಕರಣಗಳೆಲ್ಲ ಕಾಯಕದಿ ಒಡಬೆರೆದು
ತಾಯಿ ಭಾವದಿ ಜಗವ ಪೊರೆದಿರು। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಧನ್ಯ ಕನ್ನಡನಾಡು ಧನ್ಯ ಶರಣರಬೀಡು
ಧನ್ಯವಾಯಿತು ಮರ್ತ್ಯ ತಪ ಶ್ರಮದಿ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|

# ಶ್ರೀವಾಣಿ



## ಅರಮನೆಯಲ್ಲ ಛತ್ರ

ಒಮ್ಮೆ ಒಬ್ಬ ಸಾಧು ಪ್ರಯಾಣ ಮಾಡುತ್ತ ದೊಡ್ಡದೊಂದು ರಾಜಧಾನಿಗೆ ಬಂದ. ಅಲ್ಲಿ ಅರಮನೆಯನ್ನು ವಿಚಾರಿಸಿಕೊಂಡು ನಡೆದ. ಅರಮನೆ ತಲುಪಿದ ಮೇಲೆ ಒಳಗೆ ಪ್ರವೇಶಿಸಿ ವಿಶಾಲವಾದ ಹಜಾರದಲ್ಲಿ ಕುಳಿತುಕೊಂಡ. ಬಹಳ ಸಮಯವಾದರೂ ಏಳಲೇ ಇಲ್ಲ. ಸಾಯಂಕಾಲವಾಗುತ್ತ ಬಂದಿತು. ಕಾವಲುಗಾರರು ಅಲ್ಲಿಂದ ಏಳುವಂತೆ ತಿಳಿಸಿದರು. ಸಾಧು ಆ ದಿನ ಅಲ್ಲಿಯೇ ಉಳಿದು ಮರುದಿನ ಮುಂದಕ್ಕೆ ತೆರಳುವುದಾಗಿ ಹೇಳಿದ. ಕಾವಲುಗಾರರು ಕೋಪಿಸಿಕೊಂಡು ದಾರಿ-ಹೋಕರೆಲ್ಲ ಬಂದು ತಂಗಲು ಇದು ಛತ್ರವಲ್ಲ ಎಂದರು. ಸಾಧು ಇದು ಛತ್ರವೆಂದೇ ಸಾಧಿಸಿದ. ಕೊನೆಗೆ ಕಾವಲುಗಾರರಿಗೆ ಅವರ ರಾಜನನ್ನೇ ಕರೆದುತರಲು ತಿಳಿಸಿದ. ಬೇರೆ ಉಪಾಯ ಕಾಣದೆ ಕಾವಲುಗಾರರು ರಾಜನಲ್ಲಿಗೆ ಬಂದು ವಿನಂತಿಸಿಕೊಂಡರು. ರಾಜ ಯೋಗ್ಯನಾಗಿದ್ದ. ಸಾಧುವಿನ ಬಳಿಗೆ ಬಂದ. ಶಾಂತ ರೀತಿಯಲ್ಲಿಯೇ ಅರಿಕೆ ಮಾಡಿಕೊಂಡ, ಇದು ಛತ್ರವಲ್ಲ ಅರಮನೆ ಎಂಬುದಾಗಿ. ಪ್ರತಿಯಾಗಿ ಸಾಧು ಕೇಳಿದ- ರಾಜ, ನಿನಗಿಂತ ಮೊದಲು ಯಾರಿದ್ದರು? ನನ್ನ ತಂದೆ, ಅವರಿಗಿಂತ ಮೊದಲು ಯಾರಿದ್ದರು? ನನ್ನ ತಂದೆಯ ತಂದೆ ಅಂದರೆ ನನ್ನ ತಾತ, ಸರಿ ನೀನಾದಮೇಲೆ ಇಲ್ಲಿಗೆ ಯಾರು ಬರುತ್ತಾರೆ? ನನ್ನ ಮಗ, ಅವನ ನಂತರ? ನನ್ನ ಮಗನ ಮಗ, ಅಂದರೆ ನನ್ನ ಮೊಮ್ಮಗ, ಅಂದಮೇಲೆ ಇಲ್ಲಿ ಯಾರೂ ಶಾಶ್ವತ ವಾಗಿ ಇರಲಾರೆಂದರ್ಥವಲ್ಲವೆ? ನೀನೂ ಕೂಡಾತಾನೆ? ಅಂದಾಗ ಕೆಲವು ದಿನ ಮಾತ್ರ ಕೆಲವರು ಇದ್ದು ಹೋಗುವ ಸ್ಥಳ ಛತ್ರವಲ್ಲದೆ ಮತ್ತೇನು? ಎಂದು ಸಾಧು ಕೇಳಿದಾಗ ರಾಜನು ಪ್ರೀತನಾಗಿ ನಮಸ್ಕರಿಸಿದ ಸಾಧುವಿಗೆ. ಹಾಗೆಯೇ ಜಗತ್ತೇ ಒಂದು ಛತ್ರ. ಇಲ್ಲಿಗೆ ಬಂದು ನಾಲ್ಕು ದಿನ ಇದ್ದು ಹೋಗುವ ಎಲ್ಲರೂ ಪಥಿಕರು ಎಂದು ಅರ್ಥವಾಗುತ್ತದೆ ತಾನೆ. ಈ ಛತ್ರದಲ್ಲಿ ಇರುವಷ್ಟು ದಿನ ಸಾರ್ಥಕವಾದ ಬದುಕನ್ನು ಬಾಳುವುದೇ ನಾವು ಮಾಡಬೇಕಾದ ಪೂಜೆ.

"7-4-91 ರಂದು ಮಾದನಾಯ್ಕನಹಳ್ಳಿ ಬಸವಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನ ದಿಂದ ಸಂಗ್ರಹ

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ್ರೊ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

### ಚಂದಾ ವಿವರ

ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ. ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**"ಸಂಪಾದಕರು"**

**'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಕಟ್ಟರಸನ ಕಳ್ಳರು ಬಂದು ಮುತ್ತಲು
ಪಟ್ಟಣ ಬೆದರಿತ್ತು ನೋಡಾ
ಪಟ್ಟಣದ ತಳವಾರರು ದುಷ್ಟರನೆಬ್ಬಟ್ಟಲು
ಬೆದರಿಕೆ ಬಿಟ್ಟೋಡಿತ್ತು ನೋಡಾ
ಕಾಯ ಪಟ್ಟಣ ಕಳವಳವಡಗಿತ್ತಿದನೇನೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ.

ದೇಹವೆಂಬ ನಗರಕ್ಕೆ ಜೀವನೆಂಬ ರಾಜ. ಅವನನ್ನು ಅರಿಷಡ್ವರ್ಗ-ಗಳೆಂಬ ಕಳ್ಳರು ಮುತ್ತಲು ಸಕಲ ಕರಣಗಳು ತಮ್ಮ ತಮ್ಮ ಪ್ರಪಂಚದ ಕಡೆಗೆ ವಿಸ್ತಾರವಾದವು. ಅಂತಹ ದೇಹ ಸಂಬಂಧಿಯಾದ ಜೀವತ್ರಯ ಗಳೆಂಬ ಬಾರುಕರಿಗೆ ಸುಜ್ಞಾನೋದಯವಾಗಿ ಅರಿಷಡ್ವರ್ಗಗಳ ವರ್ತನೆ ಯನ್ನು ನಷ್ಟಮಾಡಿ ಸತ್ಕ್ರಿಯಾ ಸಮ್ಯಕ್ ಜ್ಞಾನವಿಡಿದಾಚರಿಸಿ ಮುಂದೆ ಕಾಲ ಕಾಮಾದಿಗಳ ಭಯವನ್ನು ಕಳೆದುಕೊಂಡು ಶ್ರೀ ಗುರುವಿನ ಮಂತ್ರೋಯೋಪ ದೇಶದಿಂದ ಅಂಗತ್ರಯದಲ್ಲಿ ಲಿಂಗತ್ರಯುವ ಸಂಬಂಧಿಸಿ ಸಕಲ ಕರಣೇಂದ್ರಿಯ ಗಳು ಲಿಂಗಮುಖವಾಗಿ, ಜೀವನ ಜೀವ ಭಾವವಳಿದು, ಭವಭೀತಿ ಬಿಟ್ಟು ಲಿಂಗದಲ್ಲಿ ಏಕತ್ವ ಹೊಂದಿತು. ಹೀಗೆ ಸರ್ವಾಂಗ ಲಿಂಗ ಸಂಬಂಧಿ ಶರಣನ ಸಕಲ ಕರಣೇಂದ್ರಿಯಗಳು ಲಿಂಗಕರಣಗಳಾಗಿ ಜೀವನ ಜೀವ ಭಾವದ ಭ್ರಾಂತಿನ ವ್ಯಾಕುಲ ಕಳೆದು ಮಂತ್ರಲಿಂಗಸ್ವರೂಪವ ಪಡೆದನು.

# ಸಿದ್ಧಗಂಗೆ ಮಹಾತ್ಮೆ

ಸಿದ್ಧರಾಜ್ ಐವಾರ್, 15/ಬಿ, ಎರಡನೇ ತಿರುವು ಸಿದ್ದಗಂಗಾ ಬಡಾವಣೆ, ತುಮಕೂರು-2

ದೇವಾ ನೀನಿರುವುದು ಸತ್ಯವಾದರೆ
ಸಿದ್ಧಗಂಗೆ ಕ್ಷೇತ್ರವಲ್ಲವೆ ?
ಸಿದ್ಧಲಿಂಗೇಶ್ವರ ಪ್ರಭು ನೀ ಕಲ್ಲಾದರೂ
ಧರ್ಮ ಶ್ರೀ ಕ್ಷೇತ್ರದಲ್ಲಿಲ್ಲವೇ ? ॥ ಪಲ್ಲವಿ ॥

ಹಡೆದವರು ನಮ್ಮ ಸಾಕಿದರೇನು
ಶಿವಕುಮಾರ ಸ್ವಾಮ್ಗೆ ನಾವ್ ಮಕ್ಕಳಲ್ಲವೇ ?
ಬುದ್ಧಿ ಬರುವ ಗಳಿಗೆಗೂ
ವಿದ್ಯೆ-ವಸತಿ ನೀಡಿ
ಕೆಲಸಕ್ಕೆ ಬಾರದ ಬಂಡೆಯನ್ನು
ಸುಂದರ ಮೂರ್ತಿಯಾಗಿ ಪರಿವರ್ತಿಸುವ
ಮತ್ತೊಂದು ಕ್ಷೇತ್ರವಿರುವುದೇ ॥ ೧ ॥

ಬರಗಾಲ-ಬಡತನ ಬಂದರೂ
ದಾಸೋಹ-ವಿದ್ಯಾದಾನ ನಿಲ್ಲದು
ಸತ್ಯವಿದೆಯೆನ್ನಲು
ಶ್ರೀ ಮಠವೇ ಸಾಕ್ಷಿಯಲ್ಲವೇ ॥ ೨ ॥

ಸತ್ಯ ಧರ್ಮವಿರುವುದನ
ಕಲಿಕಾಲದಲೂ ಕಾಣುತಿಹೆ
ನಾನಿಂದು ಬೆಳಕಿನ ಕೊನರನ್ನ
ಆ ದಿವ್ಯ ಮಂದಿರವೇ–
ಶ್ರೀ ಸಿದ್ಧಗಂಗಾ ಕ್ಷೇತ್ರ ॥ ೩ ॥

# ಸಂಪಾದಕೀಯ

**ಚುನಾವಣೆ.**

ಮುಖವಾಡಗಳು ಮತ್ತೆ ಬರುತ್ತವೆ. ಶ್ರೀ ಸಾಮಾನ್ಯನಿಗೆ ಗೌರವದ ಗೌರೀ ಶಂಕರವನ್ನು ತೋರಿಸುತ್ತವೆ. ಮಾತಿನ ಮಲ್ಲಿಗೆಯ ಮಳೆಗರೆಯುತ್ತವೆ. ಹಿರಿಯರು ರಾಕ್ಷಸರನ್ನು ಕಾಮರೂಪಿಗಳೆಂದು ಕರೆಯುತ್ತಿದ್ದರು. ಬೇಕೆನಿಸಿದಾಗ ಬೇಕಾದ ಆಕರ್ಷಕ ರೂಪಧರಿಸುವವರನ್ನು ಕಾಮರೂಪಿಗಳೆಂದು ಹೆಸರಿಸಿದ ಪೂರ್ವಿಕರಿಗೆ ಇಂದಿನ ರಾಜಕಾರಣಿಗಳ ಹಗಲುವೇಷದ ಪರಿಚಯ ಇದ್ದಿತೋ ಏನೋ. ಇವರ ಮುಂದೆ ರಾಜಾಸ್ಥಾನದ ಯಾವ ವಂದಿ ಮಾಗಧರೂ ನಿಲ್ಲಲಾರರು. ಹೊಗಳು ಭಟ್ಟರ ಪ್ರಶಸ್ತಿ ಇವರಿಗೇ ಸಲ್ಲಬೇಕು. ಸುಳ್ಳು ಇವರ ಮನೆದೇವರು. ದೇಶ, ಜನ, ಇವರಿಗೆ ತೃಣ. ಹಿರಿದದ್ದೇ ಲಾಭ-ಇವರ ಸಂತಾನ ಶನಿಸಂತಾನ. ರಕ್ತ ಬೀಜಾಸುರನ ಪರಂಪರೆಗೆ ನೈಜ ವಾರಸುದಾರರು ನಮ್ಮ ದೇಶದಲ್ಲಿ ಹರಿದ ಕಾವಿಕಪಿನಿಯನ್ನು ಹೊಲಿದು ತೊಟ್ಟುಕೊಂಡು ಸಾರ್ವಜನಿಕ ಸಂಪತ್ತನ್ನು ರಕ್ಷಿಸಿಕೊಂಡು ಬಂದ ಚಿತ್ರದುರ್ಗದ ಬೃಹನ್ಮಠದ ಶಿವಯೋಗಿ ಜಯದೇವ ಜಗದ್ಗುರುಗಳಂಥ ವಿರಕ್ತ ಸ್ವಾಮಿಗಳುಂಟು; ದೇಶ ಭಕ್ತಿಗೆ ಉದಾಹರಣೆಯಾಗಿ ಪ್ರಕಾಶಿಸಿದ್ದುಂಟು. ತಮ್ಮ ಚಿನ್ನದ ಕರಡಿಗೆಯನ್ನು ಅಡವಿಟ್ಟು ವಿದ್ಯಾರ್ಥಿಗಳನ್ನು ಅನ್ನವಿಟ್ಟು ಸಲಹಿದ ಸುತ್ತೂರು ಪೂಜ್ಯ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳಂಥವರುಂಟು, ಸಾರ್ವಜನಿಕ ಕಲ್ಯಾಣಕ್ಕೆ ತಮ್ಮನ್ನೂ ಅರ್ಪಿಸಿಕೊಂಡ ಮಾನವರತ್ನಗಳಿವರು, ಜಾತಿಯ ವಿದ್ಯಾರ್ಥಿನಿಲಯಗಳಿಗೆ ಸರ್ಕಾರವೇ ಪ್ರೋತ್ಸಾಹಿಸುತ್ತಿದ್ದ ದಿನಗಳಲ್ಲಿ ಜಾತ್ಯತೀತವಾದ ವಿದ್ಯಾರ್ಥಿನಿಲಯ ತೆರೆದು, ಕೇವಲ ಮೇಲು ವರ್ಗದವರಿಗೆ ಮೀಸಲಾಗಿದ್ದ ಸಂಸ್ಕೃತ ವೇದಾಭ್ಯಾಸವನ್ನು ಸರ್ವ ಜಾತಿ ಕುಲ ಕೋಮುಗಳಿಗೆ ಒದಗಿಸುವ ಅವಕಾಶ ಕಲ್ಪಿಸಿಕೊಟ್ಟ ಸಿದ್ಧಗಂಗೆಯ ಶಿವಯೋಗಿ ಪೂಜ್ಯ ಶ್ರೀ ಉದ್ಧಾನ ಸ್ವಾಮಿಗಳಂಥವರುಂಟು. ಇವರೆಲ್ಲ ದೇಶಭಕ್ತರಾಗಿದ್ದರು. ಇಂದೂ ದೇಶಭಕ್ತರಿದ್ದಾರೆ ಮುಖವಾಡ ಧರಿಸಿ ಬರುತ್ತಿದ್ದಾರೆ ಮನೆ ಮನೆಯ ಮುಂದೆ ಬಣ್ಣದ ಮಾತಿನ ಅಣ್ಣಗಳು ಇವರೆಲ್ಲ. ನಿನ್ನೆ ಮೊನ್ನೆ ಸಾವಿರಾರು ರೂಪಾಯಿಗಳ ಸಾಲಗಾರರಾಗಿದ್ದ ಇವರು ಇಂದು ಲಕ್ಷಾಧಿಪತಿಗಳು. ಎಲ್ಲಿಂದ ಬಂತು ಇವರಿಗೆ ಸಂಪತ್ತು. ನೈತಿಕ ದಿವಾಳಿಯ ದೀಪಾವಳಿಯಲ್ಲಿ ಬಾಣ ಬಿರುಸು ಮತಾಪು ಹಚ್ಚುತ್ತಿರುವ ಈ ಕಥಾನಾಯಕರರೆಲ್ಲರ "ಭೂತ"ವೆಂಥದು ? ಗಾಂಧಿಯನ್ನು ಕೊಂದೆನೆಂದು ಒಬ್ಬ ಘೋಡ್ಸೆಯನ್ನು ಚರಿತ್ರೆ ದಾಖಲು ಮಾಡಿತು. ಆದರೆ ನಿತ್ಯ ಅಂಗುಲಂಗುಲವಾಗಿ ಗಾಂಧಿಯ ಆತ್ಮವನ್ನು ಕೊಲ್ಲುತ್ತಿರುವ ಈ ಗಾಂಧಿ ಭಕ್ತರನ್ನು ದಾಖಲಿಸುವುದೆಂತು ? ಯಾವ ಇತಿಹಾಸಜ್ಞನಿಗೆ ಸಾಧ್ಯವಾದೀತು ? ಇವರ ತತ್ವ

ನಿಷ್ಠೆ ಯಾವುದಕ್ಕೆ? ದೇಶ ಇವರಿಗೆ ಮುಖ್ಯವಾಗಿದೆಯೆ ಡೊಂಬರಾಟದ ಚಾಣಾಕ್ಷರಿವರಲ್ಲವೆ ? ಪಕ್ಷಗಳ ಹೆಸರು ಬೇರೆ ಇವರಿಗೆ ? ಅವೂ ಆಕರ್ಷಕ ಅಕ್ಷರಗಳ ಒಕ್ಕೂಟದಲ್ಲಿ. ಬಸವಣ್ಣನವರು ಅಂದು ಒಂದು ಮಾತು ಹೇಳಿದರು ‘‘ ಹೆಂಡದ ಮಡಕೆಯ ಹೊರಗೆ ತೊಳೆದಂತೆ ” ಎಂದು. ಈ ನಾಯಕರುಗಳು ಇಂದು ಇದಕ್ಕಿಂತ ಬೇರೆ ಏನನ್ನು ಮಾಡಿದ್ದಾರೆ ಒಳಗಿನ ವಾಸನೆ ಹೋಗಿದೆಯೆ ? ಭ್ರಷ್ಟಾಚಾರವೇ ಜೀವನದ ರಾಷ್ಟ್ರೀಯ ಮಾರ್ಗವಾಗುವಂತೆ ನಡೆದು ತೋರಿಸುತ್ತಿರುವ ಇವರಿಗೆ ಹತ್ತನೆಯ ಲೋಕಸಭೆಯ ಈ ಚುನಾವಣಾ ಯಜ್ಞದಲ್ಲಿ ಭಾರತೀಯ ಎಂತಹ ಆಹುತಿಯನ್ನು ಕೊಡಬೇಕು ? ಯಾವ ಹವಿಸ್ಸನ್ನು ಯಜ್ಞಕುಂಡಕ್ಕೆ ಅರ್ಪಿಸಬೇಕು ? ಭಾರತೀಯ ಮತದಾರನೀಗ ಸಾರ್ವಭೌಮ ಅವನ ಕೈಯಲ್ಲೀಗ ಬೆಲೆಕಟ್ಟಲಾಗದ ದಿವ್ಯಾಸ್ತ್ರ. ಅದು ಸರಿಯಾಗಿ ಬಳಕೆಯಾದರೆ ಮಾತ್ರ ಲೋಕ ಕಲ್ಯಾಣ. ಇಲ್ಲದಿರೆ ‘‘ ಮೋಹಿಸಿ ಭಸ್ಮಾಸುರ ”ನ ಕಥೆಯು ಪುನರಾವತಾರ. ಭಾರತದ ಕಲ್ಯಾಣವೆಂದರೆ ಲೋಕದ ಕಲ್ಯಾಣವೆಂದೇ ಅರ್ಥ.

ಚುನಾವಣೆ ಚುಂಬಕಗಾಳಿಯಾಗಿ ಬೀಸುತ್ತಿದೆ ಭಾರತದ ದಶದಿಕ್ಕುಗಳಲ್ಲಿ. ಆದಕ್ಕೀಗ ಬೇಕಾಗಿರುವುದು ದೇಶಕಲ್ಯಾಣದ ಚಿಂತೆ ಹೊತ್ತ ಲಾಲ್‌ಬಹದ್ದೂರ್ ಶಾಸ್ತ್ರಿಗಳಂಥ ಮಹಾನಾಯಕರೇ ಹೊರತು ಮುಖವಾಡಗಳ ವೇಷಧಾರಿಗಳಲ್ಲ.

---

ಒಡೆಯರಾಡುವ ಮಾತು ಕಡೆಯ ಪರಿಯಂತರ ಕೇಳಿ, ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತನ ತೋರಯ್ಯ. ಒಡೆಯರಾಡುವ ಮಾತ ಕಂಡು, ಕರೆವಲ್ಲಿ ಕೆಡೆ ಮೆಟ್ಟಿ ಬಾಯಿ ಘನ ವೆಂದು ಆಡುವವನ ತೋರದಿರಯ್ಯ! ಅವನ ಸಂಗದಲಿ ಇರಿಸದಿರಯ್ಯ! ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯ, ಕೂಡಲ ಸಂಗಮ ದೇವಯ್ಯ ನಿಮ್ಮ ಬೇಡುವುದೊಂದೇ ವರವ.

– ಬಸವಣ್ಣ.

# ಬಸವಣ್ಣನವರ ದೃಷ್ಟಿಯಲ್ಲಿ ಮಹಿಳೆ

ಜಿ. ಶಾರದ ರಾಜಶೇಖರ್, 847, 4ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು - 40

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಒಂದು ಮಾನವೀಯಕ್ರಾಂತಿ ಮಾನವ-ಮಾನವರಲ್ಲಿ ಇದ್ದ ತಾರತಮ್ಯಗಳನ್ನು ಹೋಗಲಾಡಿಸಲು ಶ್ರಮಿಸಿದ್ದೇ ಅಲ್ಲದೆ ಗಂಡಿನ ಕೇವಲ ಒಂದು ಚಿರಾಸ್ತಿಯಂತಿದ್ದ ಹೆಣ್ಣಿನ ಸ್ಥಾನಮಾನಗಳನ್ನು ಮೇಲೆತ್ತಲು ಮಹಾ ಕಾರ್ಯವು ನಡೆಯಿತು. ಹೆಣ್ಣನ್ನು ಮಾಯೆ ಎಂದು, ಭೋಗದ ವಸ್ತುವೆಂದು ಕೀಳಾಗಿ ಕಾಣುವ ಸಂಕುಚಿತ ದೃಷ್ಟಿ ತೊಲಗಿ ಅವಳಲ್ಲಿ ಮಹತ್ವವನ್ನು ಗುರುತಿಸಿದ ಕಾರ್ಯ ನಡೆಯಿತು ಹೆಣ್ಣು ಪುರುಷರಿಗಿಂತ ಕೀಳಲ್ಲ, ತನ್ನ ಶುದ್ಧ ಚರಿತ್ರೆಯ ಶ್ರದ್ಧಾಸಕ್ತಿಯ ಆಚರಣೆಗಳಿಂದ ಪುರುಷರನ್ನು ಮೀರಿ ನಿಲ್ಲಬಲ್ಲ ಶಕ್ತಿ ಆಕೆಯಲ್ಲಿದೆ ಎಂಬುದಕ್ಕೆ ಬಸವಯುಗದ ಅನೇಕ ಶರಣೆಯರ ಪಾವನ ಚರಿತ್ರೆಗಳು ಸಾಕ್ಷಿಯನ್ನು ನುಡಿಯುತ್ತಿವೆ.

ಬಸವಣ್ಣನವರು ನಡೆಸಿದ ಅನೇಕ ಆಂದೋಲನದಲ್ಲಿ ಸ್ತ್ರೀಯನ್ನು ಸಮಾನತೆಯ ಸಹಭಾಗಿಯೆಂದು ಭಾವಿಸಿ ಪ್ರತಿಯೊಂದು ಕಾರ್ಯದಲ್ಲಿ ಮಹಿಳೆಯರನ್ನು ತೊಡಗಿಸಿದರು.

ಬ್ರಾಹ್ಮಣ ಧರ್ಮದಲ್ಲಿ ಸ್ತ್ರೀ ಶೂದ್ರ ಸ್ಥಾನದಲ್ಲಿದ್ದಳು. ಅಕೆಗೆ ದೀಕ್ಷೆಯ ಹಕ್ಕಿರಲಿಲ್ಲ, ಪೂಜೆಯ ವಿಧಿಗಳಲ್ಲಿ ಭಾಗವಹಿಸಲು ಅರ್ಹಳಾಗಿರಲಿಲ್ಲ. ಈ ವಿಷಯ ಬಸವಣ್ಣನವರ ಮನಕ್ಕೆ ಅತೀವ ವೇದನೆಯನ್ನುಂಟುಮಾಡಿತು. ಈ ಬೇಧ ಭಾವವನ್ನು ತೊಡೆದು ಹಾಕಲು ಮುಂದಾದರು. ಅದನ್ನು ಕಾರ್ಯರೂಪಕ್ಕೂ ತಂದರು. ಬಸವಣ್ಣನವರ ಪ್ರಕಾರ ಸ್ತ್ರೀ ಮಹಾದೇವಿ, ಆಕೆ ಯಾವ ಪಾತ್ರವನ್ನಾಡಲು ಯೋಗ್ಯತೆ ಉಳ್ಳವಳು. ಪುರುಷನಂತೆ ಆಕೆಯೂ ಇಷ್ಟ ಲಿಂಗವನ್ನು ಧರಿಸಿ ಪೂಜೆ ಮಾಡಲು ಅರ್ಹಳು, ತನ್ನ ಅಭಿಪ್ರಾಯವನ್ನು ಹೊಂದಿರಲೂ ಅದನ್ನು ಅಭಿವ್ಯಕ್ತ ಗೊಳಿಸಲು ಸ್ವಾತಂತ್ರವಿದೆ. ಯಾರ ಜೊತೆಗಾದರೂ ಸರಿ ಯಾವ ವಿಷಯದಲ್ಲಾದರೂ ಚರ್ಚೆಗೆ ನಿಲ್ಲಲು ಆಕೆಗೆ ಅವಕಾಶ ಮಾತ್ರವೆ ಅಲ್ಲದೆ ಯೋಗ್ಯತೆಯೂ ಇದೆ ಎಂದು ಪ್ರತಿಪಾದಿಸಿ ಅನುಭವ ಮಂಟಪದಲ್ಲಿ ಆಕೆಗೆ ಭಾಗವಹಿಸಲು ಅನುವು ಮಾಡಿ,ಕೊಟ್ಟರು. 'ಹೆಣ್ಣು ಮಾಯೆಯಲ್ಲ' ಎಂಬುದು ಶರಣರ ಒಟ್ಟಿನ ಅಭಿಪ್ರಾಯ.

ಸಂಪ್ರದಾಯದ ಪ್ರಕಾರ ಹೆಣ್ಣು, ಮಣ್ಣು ಹೊನ್ನು ಈ ಮೂರು ದುಃಖಕ್ಕೆ ಮೂಲ ಆದರೆ ಶರಣರ ಪ್ರಕಾರ ಈ ಮೂರಕ್ಕೂ ಮಾನವನ ಮನ್ಸಸಿನ ಆಸೆಯೇ ಮೂಲ, ಅವು ದೊರಕದಿದ್ದಾಗ ದುಃಖಕ್ಕೆ ಕಾರಣ ಎಂದರು. ಇನ್ನೂ ಮುಂದೆಯೋಚಿಸಿ ಹೆಣ್ಣು-ಗಂಡೆಂಬುದು ಹೊರಗಿನ ರೂಪವೇ ಹೊರತು ಆದರೊಳಗಿನ ಆತ್ಮ ಯಾವುದೂ ಅಲ್ಲವೆಂಬುದು ಶರಣರ ಸ್ಪಷ್ಟ ಅಭಿಪ್ರಾಯ.

ಜೊತೆಗೆ ಹೆಣ್ಣು ಇಹ ಜೀವನಕ್ಕೆ ಅತ್ಯಗತ್ಯವಾದ ಸಹಜೀವಿ ಎಂಬುದನ್ನು ಮನಃಪೂರ್ವಕವಾಗಿ ಒಪ್ಪಿಕೊಂಡಿದ್ದರು. ಬಸವಣ್ಣನವರು ಈ ಆದರ್ಶದ ನೆಲೆ, ಸೆಲೆ, "ಸತಿ ಪತಿಗಳು ಒಂದಾದ ಭಕ್ತಿ ಹಿತವಪ್ಪುವುದು ಶಿವಂಗೆ" ಎಂಬ ದೇವರ ದಾಸಿಮಯ್ಯನ ವಚನದಂತೆ ಅನೇಕ ಮಹಿಳೆಯರು ಪತಿಯ ಕಾಯಕ ದೀವಿಗೆಯಲ್ಲಿ ಬತ್ತಿಯಾಗಿಉರಿದು, ಎಣ್ಣೆಯಾಗಿ ತೇದರು, ಪ್ರಕಾಶವಾಗಿ ಹೊಮ್ಮಿದರು. ಮಾನವ ಸಹಜ ದೌರ್ಬಲ್ಯಕ್ಕೆ ಸಿಕ್ಕಿ ಅಧಃಪತನದತ್ತ ಸಾಗಬಹುದಾದ ಗಂಡನನ್ನು ಸಕಾಲದಲ್ಲಿ ಎಚ್ಚರಿಸಿ ಮುಕ್ತಿ ಪಥದತ್ತ ಕೊಂಡೊಯ್ದ ಶರಣೆಯರು ಅನೇಕರಿದ್ದಾರೆ, ಅನೇಕ ಮಹಿಳೆಯರಿಗೆ ಬಸವಣ್ಣನವರು ಉತ್ತೇಜನ ನೀಡಿದುದರ ಫಲವಾಗಿ ವಚನ ಕಾರ್ತಿಯರಾಗಿ ಅನೇಕ ವಚನಗಳನ್ನು ರಚಿಸಿದರು. ತಮ್ಮ ಜೀವನಾನುಭವದ ವಿಷಯಗಳನ್ನೇ ವಸ್ತುವಾಗಿಟ್ಟುಕೊಂಡು ಸುಂದರ ವಚನಗಳನ್ನು ರಚಿಸಿದ್ದಾರೆ.

"ಯತ್ರನಾರ್ಯಾಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ"

ಎಂಬ ಆದರ್ಶವಾಣಿಯನ್ನು ಕಾರ್ಯರೂಪಕ್ಕೆ ತಂದವರು ಭಕ್ತಿ ಭಂಡಾರಿ ಬಸವಣ್ಣನವರು. ಬಸವಣ್ಣನರ ನೇತೃತ್ವದಲ್ಲಿ ನಡೆದ ಈ ಮಹಾಕ್ರಾಂತಿ ಕನ್ನಡ ನಾಡಿನ ಚರಿತ್ರೆಯಲ್ಲಿ ಹೊಸ ಮನ್ವಂತರವನ್ನು ಸೃಷ್ಟಿಸಿತು. ವ್ಯಕ್ತಿಯ ವಿಕಾಸಕ್ಕೆ ನಾಂದಿಯಾಯಿತು.

'ಪರವಧುವನ್ನು ಮಹಾದೇವಿಯೆಂದು ಕಾಂಬೆ'
'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ'

ಎಂಬ ಶರಣರವಾಣಿಯು ಆದರ್ಶ ಸ್ತ್ರೀಯರ ಉದ್ಧಾರಕ್ಕೆ ನಾಂದಿಯಾಯಿತು. ಹೆಣ್ಣಿನ ಬಾಳಲ್ಲಿ ಕವಿದಿದ್ದ ಅಂಧಕಾರವನ್ನು ಹೋಗಲಾಡಿಸಿ ಜ್ಞಾನ ಹಾಗೂ ಆಧ್ಯಾತ್ಮಿಕ ಜ್ಯೋತಿಯನ್ನು ಬೆಳಗಿಸಿದರು.

# ವಚನಗಳಲ್ಲಿ ಪ್ರತಿಪಾದಿತ ಷಟ್‌ಸ್ಥಲ ವಿವೇಚನೆ

ಪ್ರೊ : ಎಸ್. ಎಸ್. ಭೂಸರೆಡ್ಡಿ, ಲಕ್ಷ್ಮೀನಗರ, ಧಾರವಾಡ-೪

ಜಾಗತಿಕ ದಾರ್ಶನಿಕ ಸಿದ್ಧಾಂತಗಳಲ್ಲಿ ವೀರಶೈವ ಸಿದ್ಧಾಂತಕ್ಕೆ ತನ್ನದೇ ಆದ ವೈಶಿಷ್ಟ್ಯತೆಯಿದೆ ನಿತಾಂತ ವೈಚಾರಿಕ ಪ್ರಜ್ಞೆಯನ್ನು ಅರಳಿಸಿಕೊಂಡು ವ್ಯವಹರಿಕ ವೈಜ್ಞಾನಿಕ ಹಿನ್ನೆಲೆಯಲ್ಲಿ ಭದ್ರವಾದ ನೀತಿಯ ತಳಹದಿಯ ಮೇಲೆ ಸೃಷ್ಟಿತತ್ತ್ವದ ಪ್ರಾಮಾಣಿಕ ಆಧಾರದ ಮೇಲೆ ತಮ್ಮ ನಿಲುವುಯನ್ನು ವಿಶ್ಲೇಷಿಸಿದ ಶರಣರು ವೀರ-ಶೈವ ಸಿದ್ಧಾಂತಕ್ಕೆ ಅಪ್ರತಿಮ ಕೊಡುಗೆ ನೀಡಿದ್ದಾರೆ. ಭಾರತೀಯ ಧರ್ಮಗಳಲ್ಲಿ ವೀರಶೈವ ಧರ್ಮಕ್ಕೆ ಇಂದೇನಾದರೂ ಮನ್ನಣೆಯಿದ್ದರೆ ಶರಣರು ರೂಪಿಸಿದ ಮೂಲಕ ಸಿದ್ಧಾಂತವೇ ಕಾರಣವೆನ್ನಬಹುದು. ಒಂದು ಪರಿಪೂರ್ಣ ಧರ್ಮವು ಹೇಗಿರಬೇಕೆಂ-ಬುದಕ್ಕೆ ವೀರಶೈವ ಧರ್ಮವು ಹೆಜ್ಜೆಹೆಜ್ಜೆಗೆ ತೋರಬೇಕಾಗಿದೆ. ಸಮಸ್ತ ಮಾನವ ಕುಲವನ್ನು ತನ್ನೆದುರಿಗಿಟ್ಟುಕೊಂಡು ಬರಬಹುದಾದ ಸಂದೇಹ ಸಂದೋಹಗಳನ್ನು ನಿಸ್ಸಂಕೋಚವಾಗಿ ಪರಿಹಾರಮಾಡಿದ ಈ ಧರ್ಮ ನಿಜವಾದ ಅರ್ಥದಲ್ಲಿ ವಿಶ್ವ-ಧರ್ಮವೇ ಆಗಿದೆ. ಮಾನವ ಚೇತನದ ಪ್ರೇರಕ ಮಹಾಶಕ್ತಿ ಆತನ ಹೃದಯ, ಈ ಹೃದಯ ಸ್ಥಾನವನ್ನು ಕೇಂದ್ರಶಕ್ತಿಯನ್ನಾಗಿ ಮಾರ್ಗಡಿಸಿ, ತನ್ಮೂಲಕ ಆತ್ಮೋದ್ಧಾರದೊಡನೆ ಲೋಕೋದ್ಧಾರಮಾಡಿದ ಹಿರಿಮೆ ಈ ಧರ್ಮಕ್ಕೆ ಸಲ್ಲುತ್ತದೆ. ಅವರು ಗುಡಿಗುಂಡಾರಗಳಲ್ಲಿ ದೇವರನ್ನು ಹುಡುಕಲಿಲ್ಲ. "ಕಾಲೇ ಕಂಭ ದೇಹವೇ ದೇಗುಲ ಶಿರವೇ ಹೊನ್ನ ಕಳಸವಯ್ಯಾ" ಎಂದು ದೇವರನ್ನು ತಮ್ಮಲ್ಲಿಯೇ ಕಂಡವರು. ಏಕದೇವೋಪಾಸನೆಯ ಮೂಲಕ ಪ್ರತಿಯೊಬ್ಬ ವ್ಯಕ್ತಿಯಲ್ಲಿರುವ ಆಂತರಿಕ ಮಹಾ ಶಕ್ತಿಯನ್ನು ತೋರಿದವರು. 'ಮರಣವೇ ಮಹಾನವಮಿ' ಎಂದವರು. ಲೋಕದಲಿದ್ದುಕೊಂಡು ಸರ್ವ ಭೋಗೋಪಭೋಗಗಳನ್ನು ತೋರಿಸಿಕೊಟ್ಟ ಶರಣರು ನಿಜವಾಗಿಯೂ ಮಹಾದರ್ಶನಿಕರು. ತಾವು ಕಂಡುಂಡ ಬಾಳಿನ ರಸನಿಮಿಷಗಳನ್ನು ವಚನ ಸಾಹಿತ್ಯಕ್ಕೆ ಮಹಾಸಾಗರದಲ್ಲಿ ತೇಲಿಬಿಟ್ಟಿದ್ದಾರೆ, ಅವು ಸಾಹಿತ್ಯಕ್ಕೆ ಸಾಹಿತ್ಯ ತತ್ತ್ವಕ್ಕೆ ತತ್ತ್ವ.

ಈ ದೆಸೆಯಲ್ಲಿ ವೀರಶೈವ ಸಿದ್ಧಾಂತವು ಮಾನವನು ಮಹಾಮಾನವನಾಗುವ, ದೇವಮಾನವನಾಗುವ ಬಗೆಯನ್ನು ನಿರೂಪಿಸುವ ದೃಷ್ಟಿಯಿಂದ 'ಅಷ್ಟಾವರಣವೇ ಅಂಗವಾಗಿ, ಪಂಚಚಾರವೇ ಪ್ರಾಣವಾಗಿ, ಷಟ್‌ಸ್ಥಲವೇ ಆತ್ಮಸ್ವರೂಪ' ವೆಂದು ನಿರೂಪಿಸಿದ್ದಾರೆ. ಹನ್ನೆರಡನೆಯ ಶತಮಾನದ ಬಸವಾದಿ ಶರಣರು ಈ ತತ್ತ್ವದ ತಳಹದಿಯ ಮೇಲೆಯೇ ಸಾಮಾನ್ಯ ಜನರಿಗೂ ತಿಳಿಯಬೇಕೆಂಬ ಹಿರಿದಾದ ಹಂಬಲದಿಂದ ಷಟ್‌ಸ್ಥಲ ಕ್ರಮದಲ್ಲಿಯೇ ವಚನ ರಚನೆ ಮಾಡಿದುದು ಐತಿಹಾಸಿಕ ಸತ್ಯ; ಶರಣರ ಈ ವಚನಗಳಿಗೆ ಷಟ್‌ಸ್ಥಲದ ವಚನಗಳೆಂದೇ ಕರೆದಿರುವುದು ಅರ್ಥಪೂರ್ಣ-

ವಾಗಿದೆ. ಇಂದಿಗೂ ಶರಣರವಚನಗಳನ್ನು ಷಟ್‌ಸ್ಥಲ ಕ್ರಮದಲ್ಲಿಯೇ ಜೋಡಿಸಿ, ಸಂಪಾದನೆ ಮಾಡುವ ಕಾರ್ಯ ಅವ್ಯಾಹತವಾಗಿ ಸಾಗಿದೆ. ಇದರಿಂದ ವೀರಶೈವರು ಷಟ್‌ಸ್ಥಲಕ್ಕೆ ಎಷ್ಟೊಂದು ಮಹತ್ವಕೊಟ್ಟಿದ್ದಾರೆ ಎಂಬುದು ಗೋಚರವಾಗುತ್ತವೆ, ಆದುದರಿಂದ ಷಟ್‌ಸ್ಥಲದ ವಿವೇಚನೆಯನ್ನು ಸಾಧ್ಯವಾದಷ್ಟುಗೆ ವಚನಗಳ ಮುಖಾಂತರ ಪ್ರಸ್ತುತ ಪಡಿಸುವುದೇ ಈ ಲೇಖನದ ಉದ್ದೇಶವಾಗಿದೆ.

ಈಗಾಗಲೇ ಸರ್ವವಿದಿತವಾದಂತೆ ಭಕ್ತ, ಮಹೇಶ, ಪ್ರಸಾಧಿ, ಪ್ರಾಣಲಿಂಗಿ, ಶರಣ, ಐಕ್ಯ, ಇವೇ ಅರು ಸ್ಥಲಗಳು. ಇವುಗಳನ್ನೇ ಬಸವಾದಿ ಪ್ರಮಥರು ಪಾರಿಭಾಷಿಕ ಈ ಅರ್ಥದಲ್ಲಿ ಷಟ್‌ಸ್ಥಲಗಳೆಂದು ಕರೆದಿದ್ದಾರೆ. ಅಂಗವು ಲಿಂಗವಾಗುವುದೇ ಲಿಂಗಾಂಗ ಸಾಮರಸ್ಯ. ಈ ಸಾಧನೆಗೆ ಷಟ್‌ಸ್ಥಲಗಳೇ ಸೋಪಾನಗಳು. ಭಕ್ತ, ಮಹೇಶ, ಪ್ರಸಾದಿ ಸ್ಥಲಗಳು ಕ್ರಿಯಾತ್ಮಕವಾಗಿದ್ದರೆ, ಪಾಣಲಿಂಗಿ, ಶರಣ, ಐಕ್ಯ ಜ್ಞಾನಾತ್ಮಕವಾಗಿವೆ. ಪ್ರಥಮ ಸ್ಥಲವಾದ ಭಕ್ತಸ್ಥಲದ ಲಕ್ಷಣಗಳನ್ನು ವಚನಗಳ ಮೂಲಕವಾಗಿಯೇ ನೋಡೋಣ. ಭಕ್ತಿಯ ಮುಖ್ಯ ಲಕ್ಷಣವೆಂದರೆ ಶ್ರದ್ಧಾಭಕ್ತಿಯಿಂದ ಅಚಾರಲಿಂಗವಾಗುವುದು. ಚನ್ನಬಸವಣ್ಣನವರು ಸದ್ಭಕ್ತನು ಹೇಗಿರಬೇಕೆಂಬುದನ್ನು ಹೇಳಿದ್ದಾರೆ: ನೋಡಿ ಈ ವಚನದಲ್ಲಿ-

“ಕಾಮಬೇಡ ಪರಸ್ತ್ರೀಯರಲ್ಲಿ,
ಕ್ರೋಧಬೇಡ ಗುರುವಿನಲ್ಲಿ,
ಲೋಭಬೇಡ ತನುಮನದಲ್ಲಿ,
ಮೋಹಬೇಡ ಸಂಸಾರದಲ್ಲಿ.
ಮದಬೇಡ ಶಿವಭಕ್ತರಲ್ಲಿ,
ಮತ್ಸರಬೇಡ ಸಕಲ ಪ್ರಾಣಿಗಳಲ್ಲಿ;
ಇಂತೀ ಷಡ್ವಿಧಗುಣವನರಿದು ಮೆರೆಯಬಲ್ಲಡೆ;
ಆತನೆ ಸದ್ಭಕ್ತ ಕಾಣಾ ಕೂಡಲ ಚೆನ್ನಸಂಗಮದೇವಾ!”

ಇದೊಂದು ಅದಯ್ಯನ ಈ ವಚನವಂತೂ ಭಕ್ತನಾದವನಿರಬೇಕಾದ ಲಕ್ಷಣಗಳನ್ನು ಬಹುವ್ಯವಸ್ಥಿತವಾಗಿ ನಿರೂಪಿಸುತ್ತದೆ.

“ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ,
ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ,
ವಿಷಯಂಗಳಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ,
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ,
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ”

ಮಾನವನು ಅನೇಕ ದೌರ್ಬಲ್ಯಗಳಿಗೆ ಬಲಿಯಾಗುವುದು ಸಹಜವೇ. ಈ ಎಲ್ಲ ಅವಗುಣಗಳನ್ನು ಬೇರು ಸಹಿತ ಕಿತ್ತೊಗೆದಾಗಲೇ ಆತನು ಭಕ್ತಸ್ಥಲಕ್ಕೆ ಸೇರಲು ಅರ್ಹನಾಗುತ್ತಾನೆ. ಬಸವಣ್ಣನವರು ಅತ್ಯಂತ ಮನೋಹರವಾಗಿ ಬೆಳೆಯುವ ದಾರಿಯನ್ನು ತೋರಿದ್ದಾರೆ–

"ಬೆಳೆದ ಭೂಮಿಯಲ್ಲೊಂದು ಪ್ರಳಯದ ಕಸಹುಟ್ಟಿ
ತಿಳಿಯಲೀಯದು, ಎಚ್ಚರಲೀಯದು.
ಎನ್ನವಗುಣವೆಂಬ ಕಸನಕಿತ್ತು ಸಲಹಯ್ಯಾ, ಲಿಂಗತಂದೆ;
ಸುಳಿದೆಗೆದು ಬೆಳೆವೆನು ಕೂಡಲ ಸಂಗಮದೇವಾ"

ಭಕ್ತಿರಸವನ್ನು ಮನದಣಿಯೇ ಮೊಯಿಸಿದ ಬಸವಣ್ಣ ಭಕ್ತಸ್ಥಲಕ್ಕೆ ಪ್ರಥಮಾಚಾರಿ; ಜ್ವಲಂತ ನಿದರ್ಶನ. ಅಂತೆಯೇ ಆತನು ಭಕ್ತಿಭಂಡಾರಿ. ಆಡಂಬರದ ಭಕ್ತಿಯನ್ನು ಆಯ್ದಕ್ಕಿ ಲಕ್ಕಮ್ಮ ಈ ರೀತಿ ವ್ಯಕ್ತ ಮಾಡಿದ್ದಾಳೆ:

"ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು.
ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ,
ಕೊಡದೆ ತ್ಯಾಗಿ ಎನಿಸಿ ಕೊಂಬುದು ಮುಡಿಯಿಲ್ಲದ ಶೃಂಗಾರ
ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ.
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವ ಮುಟ್ಟದ ಭಕ್ತಿ"

ಭಕ್ತ ಸ್ಥಲಕ್ಕೇರುವುದು ಸುಲಭದ ಮಾತೇನಲ್ಲ. ಎಂಬುದಕ್ಕೆ ಬಸವಣ್ಣನವರ ವಚನವೇಸಾಕ್ಷಿ

"ಭಕ್ತಿಯೆಂಬುಂದ ಮಾಡಬಾರದು,
ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು
ಘಟಸರ್ಪನಲ್ಲಿ ಕೈದುಡುಕಿದಡೆ ಹಿಡಿವುದಮಾಣ್ಬುದೆ ಕೂಡಲಸಂಗಮದೇವಾ"

ಒಟ್ಟನಲ್ಲಿ ಶರಣರ ದೃಷಿಯಲ್ಲಿ ಭಕ್ತಿಗೆ ವಿಶಿಷ್ಟ ಸ್ಥಾನವಿದೆ. ಭಕ್ತಿಯೇ ಶಕ್ತಿ. ಶಕ್ತಿಯೇ ಮುಕ್ತಿ. ಅಂತೆಯೇ ಭಕ್ತಿ ಪಂಚಮ ಪುರುಷಾರ್ಥವೆನಿಸಿಕೊಂಡಿದೆ. ಇದು ಶರಣರ ಪ್ರಗತಿಯ ದ್ಯೋತಕ. ಭಕ್ತಿಯೆಂಬುದು ತೋರುಂಬುವ ಲಾಭವಲ್ಲ. ಅಜ್ಞಾನ, ಕಂದಾಚಾರ ಮೂಢ ನಂಬಿಕೆಗಳನ್ನು ದೂರೀಕರಿಸಿ, ಶಾಸ್ತ್ರೀಯವಾಗಿ ಧರ್ಮ ತತ್ವದ ತಳಹದಿಯ ಮೇಲೆ ಶರಣರು ಭಕ್ತಸ್ಥಲವನ್ನು ಭದ್ರವಾಗಿರಿಸಿದ್ದಾರೆ.

ಎರಡನೆಯ ಸ್ಥಲವಾದ ಮಹೇಶ್ವರ ಸ್ಥಲದಲ್ಲಿ ನಿಷ್ಠೆಗೆ, ಛಲಕ್ಕೆ ಹೆಚ್ಚಿನ ಪ್ರಾಧಾನ್ಯತೆಯಿದೆ. ನೀತಿ - ನಿಯಮಗಳನ್ನು ಅನುಷ್ಠಾನಕ್ಕೆ ತರಬೇಕೆಂಬ ಉತ್ಕಟ ಇಚ್ಛೆ ಇದರಲ್ಲಿ ವ್ಯಕ್ತವಾಗಿದೆ. ಧೈರ್ಯ ಸ್ಥೈರ್ಯಗಳಿಗೆ ಹೆಚ್ಚಿನ ಒತ್ತು ಕೊಡಲಾಗಿದೆ. ವ್ಯವಹಾರಿಕವಾಗಿ ವಿಚಾರ ಮಾಡಿದರೂಕೂಡ ಮಹೇಶ್ವರ ಸ್ಥಲದ ಮಹತ್ವವೆಷ್ಟಿದೆಯೆಂಬುದು ತಿಳಿಯುತ್ತದೆ. ಭಕ್ತ ಹಾಗೂ ಮಹೇಶ್ವರ ಸ್ಥಲಗಳು ಸ್ಥೂಲ ಶರೀರಕ್ಕೆ ಸಂಬಂಧಿಸಿವೆ. ಇದಕ್ಕೆ ತ್ಯಾಗಾಂಗವೆಂದು ಕರೆಯಲಾಗಿದೆ. ಬಸವಣ್ಣನವರ ವಚನವೊಂದು ಮಹೇಶ್ವರಸ್ಥಲದ ಲಕ್ಷಣವನ್ನು ಚೆನ್ನಾಗಿ ವಿಶ್ಲೇಷಿಸಿದೆ–

" ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ;
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೆ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ

ಈ ಸ್ಥಲದಲ್ಲಿ ಏಕದೇವೋಪಾಸನೆಯ ತತ್ವಕ್ಕೆ ಪ್ರಾಮುಖ್ಯತೆಯಿದೆ. ಶರಣರು ತಮ್ಮ ಹೃದಯದ ಕಿಟಕಿಗಳನ್ನು ತೆರೆದ ಪುಸ್ತಕದಂತೆ ತೆರೆದಿಟ್ಟು, ತಮಗೆ ಒಪ್ಪಿಗೆಯಾದ ತತ್ವವನ್ನು ಹೆಕ್ಕಿಕೊಂಡಿದ್ದಾರೆ. ಏಕದೇವೋಪಾಸನೆಯ ತತ್ವವನ್ನು ಬಹುಮಟ್ಟಿಗೆ ದೇವರಲ್ಲಿ ನಂಬುಗೆಯುಳ್ಳ ಧರ್ಮಗಳು ಒಪ್ಪಿಕೊಂಡಿರುವುದು ಪ್ರಜ್ಞಾಜಗತ್ತಿಗೆ ಗೊತ್ತಿದ್ದ ವಿಷಯವೇ ಆಗಿದೆ. ಈ ಮೌಲಿಕ ವಿಚಾರಧಾರೆಗೆ ಶರಣರು ಅನುಭವ ಪ್ರಾಮಾಣ್ಯತೆಯನ್ನು ಮೇಳೈಸಿಕೊಂಡು, ಮೈಗೂಡಿಸಿಕೊಂಡು ಏಕದೇವೋಪಾಸನೆಯ ತತ್ವವನ್ನು ಮಹೇಶ್ವರ ಸ್ಥಲದಲ್ಲ ಚಿರಸ್ಥಾಯಿಯಾಗಿ ನೆಲೆಗೊಳಿಸಿದ್ದಾರೆ. ಇಲ್ಲಿ ಅಂಬಿಗರ ಚೌಡಯ್ಯನ ವಚನವೊಂದನ್ನು ನೋಡಬಹುದು

" ನಿಜಗಂಡನ ಸಂಗವನೊಲ್ಲದೆ
ಬೋಜಗರ ಸಂಗವಮಾಡುವ
ಬಾಜೇರಿ ತೊತ್ತಿಗೆ ಎಲ್ಲಿಯದೋ ನಿಜ ಮುತ್ತೈದಿತನ ?
ತ್ರಿಜಗವಂದಿತ ಲಿಂಗವ
ಕರಕಮಲದಲ್ಲಿ ಹಿಡಿದುಕೊಂಡು, ಮತ್ತೆ
ಅನ್ಯ ದೈವಕ್ಕೆರಗಿದರೆ
ನಾಯಕ ನರಕವೆಂದಾತ ನಮ್ಮ
ದಿಟ್ಟಾದಿದಿಟ್ಟ, ವಿರಾಧಿವೀರ ಅಂಬಿಗರ ಚೌಡಯ್ಯ "

"ಪರಮ ಪತಿವ್ರತೆಗೆ ಗಂಡನೊಬ್ಬನೇ ಕಾಣಿರೋ" ಎಂಬ ಬಸವಣ್ಣನವರ ವಚನದಂತೆ ನಂಬುಗೆಗೆ, ವಿಶ್ವಾಸಕ್ಕೆ ಹೆಚ್ಚಿನ ಮಹತ್ವವಿದೆ. ಈ ಮಾತಿಗೆ ಸತ್ಯಕ್ಕನ ವಚನ ನೋಡಿ -

"ತಲೆಯ ಮೇಲೆ ತಲೆಯುಂಟೆ? ಹಣೆಯಲ್ಲಿ ಕಣ್ಣುಂಟೆ?
ಗಳದಲ್ಲಿ ವಿಷವುಂಟೆ? ದೇವರೆಂಬವರಿಗೆಂಟೊಡಲುಂಟೆ?
ತಂದೆಯಿಲ್ಲದವರುಂಟೆ, ತಾಯಿಯಿಲ್ಲದವರುಂಟೆ?
ಎಲವೊ, ನಿನ್ನ ಹಣೆಯಲ್ಲಿ ನೇಸರುಮೂಡದೆ,
ಶಂಭುಜಕ್ಕೇಶ್ವರನಲ್ಲದೆ ಉಳಿದದೈವಂಗಳುಂಟೆ?"

ನಿಷ್ಠೆ ಗಟ್ಟಿಗೊಂಡಾಗಲೇ ಮಹೇಶ್ವರನ ಸಾಕ್ಷಾತ್ಕಾರ ಸಾಧ್ಯ ಎನ್ನುತ್ತಾರೆ ಬಸವಣ್ಣನವರು.

"ನಿಷ್ಠೆಯಿಂದ ಲಿಂಗವ ಪೂಜಿಸಿ
ಮತ್ತೊಂದು ಪಥವನರಿಯದ ಶರಣರು
ಸರ್ಪನ ಹೆಡೆಯ ಮಾಣಿಕದಂತಿಪ್ಪರು ಭೂಷಣರಾಗಿ
ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು.
ಕೂಡಲಸಂಗಮದೇವಾ ನಿಮ್ಮ ಶರಣರು"

ನಿಜಲಿಂಗ ಚಿಕ್ಕಯ್ಯನು ಅರಿವನ್ನು ಬಲಮಾಡಿಕೊಂಡ ಮನೋಹರವಾದ ವಚನವನ್ನು ಈ ಸಂಧರ್ಭದಲ್ಲಿ ಸ್ಮರಿಸಿದರೆ– ವಿಷಯ ಇನ್ನಷ್ಟು ಸ್ಪಷ್ಟವಾದೀತು.

"ಮನವ ಮಂಚಮಾಡಿ ಚಿತ್ತದಿ ಪಚ್ಚಡಿಸುವೆ ಬಾರಯ್ಯಾ,
ಎನ್ನಶಿವಲಿಂಗವೇ ಬಾರಯ್ಯಾ,
ಎನ್ನ ಭಕ್ತವತ್ಸಲನೆ ಬಾರಯ್ಯಾ,
ಎನ್ನ ಭಕ್ತದೇಹಿಕ ದೇವನೆ ಬಾರಯ್ಯಾ,
ಎನ್ನ ಅಂತರಂಗದೊಳಿರು ಬಾರಯ್ಯಾ,
ಎನ್ನ ಬಹಿರಂಗದೊಳಿರುಬಾರಯ್ಯ,
ಓಂ ನಮಃ ಶಿವಾಯ ಎಂದು ಕರೆವೆನು ಉಳಿಯುಮೇಶ್ವರಾ"

ವೀರವಿರಾಗಿಣಿ, ಅನುಪಮ ಅನುಭಾವಿ ಅಕ್ಕಮಹಾದೇವಿಯು ಮಹೇಶ್ವರ ಸ್ಥಲದ ಕಟ್ಟುನಿಟ್ಟುಗಳನ್ನು ಅಚ್ಚುಕಟ್ಟಾಗಿ ನಿವೇದಿಸಿದ ವಚನ ಬಹುಗಮನಾರ್ಹವಾಗಿದೆ.

"ನಿಷ್ಠೆ ನಿಬ್ಬೆರಗು ಗಟ್ಟಿಗೊಂಡಡೆ
ಏಕೋ ಭಾವದಲ್ಲಿ ಸೊಮ್ಮು ಸಂಬಂಧ;

ಅಚಾರ ವಿಚಾರ ವಿಸರ್ಜನ ದ್ವಿಭಾವ ಬುದ್ದಿಲಯವಾದಡೆ ಆತ
ಮಾಹೇಶ್ವರ;
ಗುರುಮುಖದಲ್ಲಿ ಸರ್ವಶುದ್ಧನಾಗಿ ಪಂಚಭೂತದ ಹಂಗ ಅಡಗಿದಡೆ
ಆತ ಮಾಹೇಶ್ವರ.......

ಮಹೇಶ್ವರ ಸ್ಥಲಕ್ಕೆ ಸಾಕ್ಷಿಯಾದ ಮಡಿವಾಳಮಾಚಿದೇವನನ್ನು ಕುರಿತಾಗಿ ಬಸವಣ್ಣನವರು ನಿರೂಪಿಸಿದ ವಚನವನ್ನು ಇಲ್ಲಿ ಸ್ಮರಿಸಬಹದು—

"ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ,
ಎನ್ನ ಮನವ ನಿರ್ಮಲವ ಮಾಡಿದಾತ ಮಡಿವಾಳ,
ಎನ್ನಂತರಂಗವ ಬೆಳಗಿದಾತ ಮಡಿವಾಳ,
ಎನ್ನ ಬಹಿರಂಗವ ಬೆಳಗಿದಾತ ಮಡಿವಾಳ,
ಕೂಡಲಸಂಗಮದೇವಾ,
ಎನ್ನ ನಿಮಗೆ ಯೋಗ್ಯವ ಮಾಡಿದಾತ ಮಡಿವಾಳ"

ಪ್ರಸಾದಿಯ ಮುಖ್ಯ ಲಕ್ಷಣವೆಂದರೆ ಸರ್ವವನ್ನು ಶಿವನಿಗೆ ಸಮರ್ಪಿಸುವುದು. ಈ ಸರ್ವಾರ್ಪಣ ಭಾವಕ್ಕೆ ಲಿಂಗಭೋಗೋಪಭೋಗಿ ಎಂದೂ ಕರೆಯುತ್ತಾರೆ. ಇಲ್ಲಿ ಅಹಂಕಾರದ ನಿರಸನವಿದೆ. ಪ್ರಸಾದದ ಪ್ರಸನ್ನತೆಯಿದೆ. ಇದರಿಂದ ದಾಸೋಹಂಭಾವ ಮೂಡುತ್ತದೆ. ಅದುದರಿಂದ ಬಸವಣ್ಣನವರು "ಮಾಡಬೇಕು ಮಾಡದಂತಿರಬೇಕು; ಮಾಡುವ ಮಾಟದಲ್ಲಿ ತಾನಿಲ್ಲದಂತಿರಬೇಕು" ಎಂದು ಉಗ್ಗಡಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಸತ್ಯಶುದ್ಧ ಕಾಯಕದಿಂದ ಬಂದ ಗಳಿಕೆಯನ್ನು ಕೇವಲ ತನಗಾಗಿ ಮಾತ್ರವಲ್ಲ ಲೋಕಹಿತಕ್ಕಾಗಿ ಬಳಸಬೇಕೆಂಬ ಉದಾತ್ತ ತತ್ತ್ವ ಅಡಕವಾಗಿದೆ. ಸತ್ಕ್ರಿಯಾಚರಣೆಯ ಮಹತ್ತ್ವವನ್ನು ವೈರಾಗ್ಯನಿಧಿ ಅಲ್ಲಮಪ್ರಭುವಿನ ವಚನದಿಂದ ತಿಳಿಯೋಣ :

"ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ?
ಇದು ಕಾರಣ ನಮ್ಮ ಗುಹೇಶ್ವರಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ
ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ"

ಸಾಧಕನಿಗೆ ವಿಶ್ವಾಸಶ್ರದ್ಧೆಗಳೊಂದಿಗೆ ಸಕ್ರಿಯೆಯೂ ಮೇಳೈಸಿರಬೇಕು. ಅಂತರಂಗದಲ್ಲೆ ಅರಿವಾದರೂ ಬಹಿರಂಗದಲ್ಲಿ ಕ್ರಿಯೆಯಿಲ್ಲದಿದ್ದರೆ ನಿರರ್ಥಕವೇ ಸರಿ. — ಎಂದು ಮಹಾನುಭಾವಿ ಬಸವಣ್ಣನವರು ತಿಳಿಹೇಳಿದ್ದಾರೆ-

ಕ್ರಿಯಾಜ್ಞಾನ ಸಂಬಂಧವೆಂದು ನುಡಿವರು,
ಕ್ರಿಯಾಜ್ಞಾನ ಸಂಬಂಧವೆಂತಿರ್ಪುದೆಂದರಿಯರು,
ಕ್ರೀಯಲ್ಲಿ ಅಂಗಲಿಂಗಕ್ಕೆ ಸಂಬಂಧವನರಿಯರು,
ಜ್ಞಾನದಲ್ಲಿ ಲಿಂಗಜಂಗಮ ಸಂಬಂಧವನರಿಯರು,
ಕ್ರೀಯಲ್ಲಿ ಅರ್ಪಿತಪ್ರಸಾದ ಸಂಬಂಧವನರಿದು,
ಜ್ಞಾನದಲ್ಲಿ ತೃಪ್ತಿ ಪರಿಣಾಮವನರಿದು, ಕ್ರೀಯೊಳಗಿದ್ದು,
ಜ್ಞಾನಸಂಪನ್ನನಾಗಿರಬಲ್ಲ ಶರಣಂಗೆ

ನಿಮ್ಮ ಬಟ್ಟೆಗಳ
ಶುಭ್ರತೆಗೆ
BAR SOAP
ಕೇಸರಿ ಬಾರ್ ಸೋಪ್
ನೀಲಿ ಬಾರ್
ತಯಾರಕರು:
ಜಿನೇಂದ್ರ
ಸೋಪ್ ಫ್ಯಾಕ್ಟರಿ,
ಇಂಡಸ್ಟ್ರಿಯಲ್ ಎಸ್ಟೇಟ್, ತುಮಕೂರು.

# " ದಲಿತೋದ್ಧಾರಕ ಸಂವಿಧಾನ ಶಿಲ್ಪಿ ಅಂಬೇಡ್ಕರ "

ಶ್ರೀ ಕರ್ಕಿ ಸುಬ್ರಾಯ ಭಟ್ಟ, ಸಹಶಿಕ್ಷಕರು, ಹಿಂದೂ ಹೈಸ್ಕೂಲ್, ಕಾರವಾರ, ಉ. ಕ.

ನೀವು ನಿಮ್ಮ ಉದ್ಧಾರಕನನ್ನು ಅಂಬೇಡ್ಕರರಲ್ಲಿ ಕಂಡುಕೊಂಡಿದ್ದೀರಿ. ನಿಮ್ಮ ಶತಶತಮಾನಗಳ ದಾಸ್ಯಸಂಕೋಲೆಯನ್ನು ಅವರು ಮುರಿದೊಗೆಯುವರೆಂಬ ಬಗ್ಗೆ ಭರವಸೆ ನನಗೆ ಇದೆ. ಅವರು ಅಖಿಲ ಭಾರತ ಖ್ಯಾತಿಯ ಪ್ರಥಮದರ್ಜೆ ನಾಯಕ ಶಿರೋಮಣಿಯಾಗಿ ರಾರಾಜಿಸುವ ದಿನ ಬಂದೇ ಬರುತ್ತದೆ ಎಂದು ನನ್ನ ಆತ್ಮ ನುಡಿಯುತ್ತಿದೆ " ಎಂದು ಇಂದಿಗೆ 70 ವರ್ಷದ ಹಿಂದೆ ಸಾಹುಮಹಾರಾಜರು ಅಸ್ಪೃಶ್ಯರ ಮಹಾಸಭೆಯೊಂದನ್ನು ಉದ್ದೇಶಿಸಿ ಮುಕ್ತಕಂಠದಿಂದ ಘೋಷಿಸಿದ್ದು ಕೆಲವೇ ದಿನದಲ್ಲಿ ಶತಸಿದ್ಧವಾಗ ಮೂರ್ಪಟ್ಟಿತ್ತು. ದಲಿತ ಕುಲದಲ್ಲಿ ಜನಿಸಿದ ದಲಿತೋದ್ಧಾರಕ ಅಂಬೇಡ್ಕರ ಕೆಲವೇ ದಿನದಲ್ಲಿ ಭಾರತಮಾತೆಯ ಮಡಿಲಲ್ಲಿ ತುಂಬಿಕೊಂಡಿದ್ದ ಕಲಂಕವನ್ನು ಹೊಡೆದೋಡಿಸುವಲ್ಲಿ ಹಾಗೂ ಜಗತ್ ಪ್ರಸಿದ್ಧ ವ್ಯಕ್ತಿಯಾಗಿ ನಿಲ್ಲುವಲ್ಲಿ ಯಶಸ್ವಿಯಾದರು.

" ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ " ಎನ್ನುವ ಗೀತ ಶ್ಲೋಕದಲ್ಲಿ ಕೃಷ್ಣನು ಅಧರ್ಮ ಹೆಚ್ಚಿದಾಗ ದುಷ್ಟರು ಹೆಚ್ಚಿದಾಗ ನಾನು ಜನಸಿ ಬರುತ್ತೇನೆ ಎಂದು ಹೇಳಿದ್ದಾನೆ.

ಶತಶತಮಾನಗಳಿಂದ ತುಳಿತಕ್ಕೊಳಗಾಗಿ, ಜನ್ಮದಿಂದಲೂ ಹಿಂಸೆಯನ್ನು ಅನುಭವಿಸುತ್ತಾ ಕೀಳುಪ್ರಾಣಿಗಳಿಗಿಂತ ಕಡೆಯಾಗಿ, ಮೇಲುವರ್ಗದವರ ಎಂಜಲು ಕೂಳನ್ನು ತಿಂದು, ಅವರು ಉಟ್ಟು ಎಸೆದ ಬಟ್ಟೆಗಳನ್ನು ಧರಿಸಿ, ಭಾರತೀಯರಾಗಿದ್ದರೂ, ಹಿಂದೂಗಳೇ ಆಗಿದ್ದರೂ, ಭಾರತೀಯ ಜನಸಮೂಹದಲ್ಲಿ ಶೇಕಡಾ 20 ರಷ್ಟು ಜನಸಂಖ್ಯೆ ಹೊಂದಿದ್ದರೂ ಉಳಿದವರಿಗಿಂತ ಬೇರೆಯಾಗಿ ಊರ ಹೊರಗಿನ ಪ್ರದೇಶದಲ್ಲಿ ಕೊಳಕುನಾರುವ ಜಾಗದಲ್ಲಿ ವಾಸಮಾಡುತ್ತಾ, ಹರಕು ಮುರುಕು ಮನೆಯಲ್ಲಿ ಜೀವನಸಾಗಿಸುತ್ತ ಮೇಲು ವರ್ಗದವರ ಅಡಿಗೆ ಮುಡಿಚಾಚಿ ಅವರೆದುರು ಅಂಗೈಚಾಚಿ ಬಾಳನ್ನು ಸಾಗಿಸುವ ಜನರ ಉದ್ಧಾರಕ್ಕಾಗಿ; ಸಂವಿಧಾನವನ್ನು ರಚಿಸುವ ರೂವಾರಿಯಾಗಿ, ಸಮಾನತಾ ಧರ್ಮವನ್ನು ರಕ್ಷಿಸುವದಕ್ಕಾಗಿ ಆಧುನಿಕ ಮನುವಾಗಿ, ದಲಿತರ ಬಾಳಿಗೆ ಬೆಳಕನ್ನು ನೀಡುವ ಸೂರ್ಯನಾಗಿ, ದಲಿತರ ನಾಲಿಗೆಯಾಗಿ, ಶಕ್ತಿಯಾಗಿ, ಬೆಳಕನ್ನು ನೀಡುವ ಜ್ಯೋತಿಯಾಗಿ ಅವರಿಗೆ ಬಾಳನ್ನು ನೀಡಿ ಸಮಾನವಾಗಿ ಬದುಕಲು ಅವಕಾಶ ಕಲ್ಪಿಸುವುದಕ್ಕಾಗಿ ಜನಸಿ ಬಂದವರೇ ಡಾ|| ಬಾಬಾಸಾಹೇಬ ಅಂಬೇಡ್ಕರ.

ಕೆಸರಿನ ಕೊಳದಲ್ಲಿ ಕಮಲ, ಮುಳ್ಳಿನ ಗಿಡದಲ್ಲಿ ಹೂವು ಜನಿಸುವಂತೆ ಅನೇಕ ಶತಮಾನಗಳಿಂದ ತುಳಿತಕ್ಕೊಳಗಾದ ಮಹಾರಾಷ್ಟ್ರದ ಮಹಾರ್ ಎಂಬ ಅಸ್ಪೃಶ್ಯ ಜಾತಿಯ ರಾಮಜಿ ಹಾಗೂ ಭೀಮಾಬಾಯಿಯ 14ನೇ ಮಗನಾಗಿ (ಇಂದಿಗೆ 100 ವರ್ಷದ ಹಿಂದೆ ಅಂದರೆ) 1891 ಏಪ್ರಿಲ್ 14 ರಂದು ಅಂಬೇಡ್ಕರರ ಜನನವಾಯಿತು.

ಭೀಮಜಿಯ ಪ್ರಾಥಮಿಕ ವಿದ್ಯಾಭ್ಯಾಸವು ಸಾತಾರದ ಶಾಲೆಯಲ್ಲಿ ಮುಗಿಸಿ ನಂತರ ಅಂದಿನ ದಿನದಲ್ಲಿ ಅಸ್ಪೃಶ್ಯರಿಗೆ ಅಸಾಮಾನ್ಯವಾದ ವಿದ್ಯೆಯನ್ನು ತನ್ನದಾಗಿ ಸಿಕೊಂಡರು ಅಂಬೇಡ್ಕರ. ಹೋದೆಡೆಯಲ್ಲೆಲ್ಲ ನೀನು ಹೊಲೆಯ, ನೀನು ಪಂಚಮ, ನೀನು ಅಸ್ಪೃಶ್ಯ, ನಿನಗೆ ಸಂಸ್ಕೃತ ಕಲಿಕೆ ಸಲ್ಲ, ಮುಂತಾದ ಹೀನ ನುಡಿಗಳನ್ನು ಸಹಿಸಿಕೊಂಡೂ 1907 ರಲ್ಲಿ ಮೆಟ್ರಿಕ್ ಪರೀಕ್ಷೆಯನ್ನೂ, 1912 ರಲ್ಲಿ ಬಿ.ಎ. ಪದವಿಯನ್ನೂ 1915ರಲ್ಲಿ ಎಂ.ಎ. ಪದವಿಯನ್ನೂ 'ಪುರಾತನ ಭಾರತದ ವಾಣಿಜ್ಯ' ಎಂಬ ಪ್ರಬಂಧ ಬರೆಯುವುದರ ಮೂಲಕವೂ 'ಭಾರತದ ರಾಷ್ಟ್ರೀಯ ಆದಾಯ ಒಂದು ಐತಿಹಾಸಿಕ ಹಾಗೂ ವಿವರಣಾತ್ಮಕ ಅಧ್ಯಯನ' ಎಂಬ ಪ್ರಬಂಧ ಬರೆದು ಪಿ.ಎಚ್.ಡಿ. ಪದವಿಯನ್ನು ಕೊಲಂಬಿಯಾ ವಿಶ್ವವಿದ್ಯಾಲಯದಿಂದ ಪಡೆದರು. ಲಂಡನ್‌ನ 'ಗ್ರೇಸ್ ಇನ್' ಕಾಲೇಜಿನಲ್ಲಿ ನ್ಯಾಯಶಾಸ್ತ್ರ ಅಧ್ಯಯನವನ್ನು ಹಾಗೂ 'ಸ್ಕೂಲ್ ಆಫ್ ಇಕೊನೋಮಿಕ್ಸ್' ದಲ್ಲಿ ಅರ್ಥಶಾಸ್ತ್ರವನ್ನು ಅಧ್ಯಯನಮಾಡಿದರು. ಹಾಗೂ ತಮ್ಮ ಹಟದಲ್ಲಿ ಆಸೆಯಲ್ಲಿ ಒಂದಾದ ಡಿ.ಎಸ್.ಸಿ. ಪದವಿಯನ್ನು ಪಡೆದು ಕೊಂಡರು. ಹೀಗೆ ದೇಶ ವಿದೇಶದಲ್ಲಿ ಓದಿ ಆಳಜ್ಞಾನವನ್ನು ಪಡೆದುಕೊಂಡ ಅಂಬೇಡ್ಕರರು ತಮ್ಮವರ ಏಳಿಗಾಗಿ ಹಗಲಿರುಳೆನ್ನದೆ ಶ್ರಮಿಸಿದರು.

ತಮ್ಮವರಿಗಾಗಿ "ಬಹಿಷ್ಕೃತ ಹಿತಕಾರಿಣಿಸಭಾ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು ಹಾಗೂ ತಮ್ಮವರನ್ನು ಜಾಗೃತ ಗೊಳಿಸಲು "ಬಹಿಷ್ಕೃತಭಾರತ" ಎಂಬ ಮರಾಠಿ ಪಾಕ್ಷಿಕ ಪತ್ರಿಕೆಯನ್ನು ಹೊರಡಿಸಿದರು. ತಮ್ಮವರೆಲ್ಲರನ್ನು ಒಗ್ಗೂಡಿಸಿ ಅವರಿಗೆ ಸ್ವಾಭಿಮಾನ ಬೆಳೆಸಿಕೊಳ್ಳಲು ಸಮಾನವಾಗಿ ಬದುಕಲು ಕರೆ ಕೊಟ್ಟ ಸಮಾನತೆಗಾಗಿ ಹಲವಾರು ಚಳುವಳಿ ಸಂಘಟಿಸಿದರು. ಅದರಲ್ಲಿ 'ಮಹದ್' ನಗರದ ಚಳುವಳಿ ಗಾಂಧಿಯವರ ದಂಡೀ ಸತ್ಯಾಗ್ರಹಕ್ಕೆ ಸಮಾನವಾದ ಚಳುವಳಿ ಯಾಗಿತ್ತು.

ಅಂಬೇಡ್ಕರರ ಪ್ರತಿಯೊಂದು ಭಾಷಣವೂ ಕೂಡ ದೀನ ದಲಿತರ ನೋವು ಸಂಕಟದ ವೇದನೆಯ ಮೂರ್ತ ಸ್ವರೂಪವಾಗಿತ್ತು. ಅವರು "ಬಲಿಕೊಡಲು ಆಡನ್ನು ಮಾತ್ರ ಉಪಯೋಗಿರುತ್ತಾರೆಯೇ ಹೊರತು ಸಿಂಹಗಳನ್ನಲ್ಲ" ಎಂದು ನಂಬಿದ್ದು ಪ್ರತಿಯೊಬ್ಬರು ಸಿಂಹದಂತಾಗಲು ಕರೆಕೊಟ್ಟರು.

ಸಿದ್ಧಗಂಗಾ

"ಯಾವುದೇ ಒಂದು ನಿರ್ಣಯಕ್ಕೆ ಕಾಯದೆಯ ಬೆಂಬಲ ಇರಲೇಬೇಕು ಇಲ್ಲದಿದ್ದರೆ ಅದು ಭರವಸೆಯೇ ಹೊರತು ಆಚರಣೆ ಬರಲಾರದು" ಎಂದು ಹೇಳಿ ದಲಿತರ ಸಮಾನತೆಗೆ ಕಾಯಿದೆಯ ಬೆಂಬಲ ದೊರಕಿಸಲು ಶ್ರಮಿಸಿದರು. ಕೀರ್ತಿಯು ಬೆನ್ನಟ್ಟದ ಅಂಬೇಡ್ಕರರಿಗೆ ಅವರ ಕೆಲಸದಿಂದ ಕೀರ್ತಿಯೇ ಬೆನ್ನಟ್ಟಿ ಬರುವಂತಾಯಿತು.

ಅಂಬೇಡ್ಕರರು ಕೇವಲ ಅವರ ಜನಾಂಗದ ಏಳಿಗೆಗಾಗಿ ಅಷ್ಟೇ ಶ್ರಮಿಸಲಿಲ್ಲ. ಇಡೀ ಭಾರತದ ಸ್ವತಂತ್ರ ಸರ್ಕಾರಕ್ಕೆ ನಿರ್ದೇಶನ ನೀಡುವ ಸಂವಿಧಾನವನ್ನು ರಚಿಸಿದರು. ಶಿಲ್ಪಿಯೊಬ್ಬ ಹಗಲಿರುಳೆನ್ನದೆ ಸುಂದರ ಶಿಲ್ಪವನ್ನು ನಿರ್ಮಿಸಲು ಹೆಣಗುವಂತೆ, ಶಿಲ್ಪಿ ಬೇರೆ ಬೇರೆ ಕೋನದಿಂದ ಸುಂದರತೆಯನ್ನು ವೀಕ್ಷಿಸಿ ಶಿಲ್ಪರಚಿಸುವಂತೆ,' ಅಂಬೇಡ್ಕರರು ಬೇರೆ ಬೇರೆ ದೇಶದ ಸಂವಿಧಾನವನ್ನು ಅಧ್ಯಯನಮಾಡಿ ಭಾರತದ ಸುದೀರ್ಘ ಸಂವಿಧಾನದ ಕರಡು ತಯಾರಿಸಿದರು.

"ಇಂದು ಪ್ರತ್ಯೇಕ ರಾಷ್ಟ್ರಕ್ಕಾಗಿ ಚಳುವಳಿ ನಡೆಸುತ್ತಿರುವ ಮುಸ್ಲಿಂ ಲೀಗ್ ಒಂದಲ್ಲ ಒಂದು ದಿನ ಈ ಸತ್ಯವನ್ನು ಮನಗಂಡು ಅಖಂಡ ಭಾರತವೇ ನಮಗೆ ಹಿತಕರ ಹಾಗೂ ಶ್ರೇಷ್ಠ. ಅನ್ಯಥಾ ಶರಣಂ ನಾಸ್ತಿ ಎಂಬುದನ್ನು ಅರಿಯಬಹುದು. ಎಂಬುದು ನನ್ನ ಮಟ್ಟಿಗೆ ಅಸಂದಿಗ್ಧ"

"ನಾವು ಯಾವದೇ ವಿರೋಧಿಶಕ್ತಿ ತಲೆ ಎತ್ತಿದಾಗ ಏಕದೇಹಿಯಾಗಿ ಮೇಲೆದ್ದು ಬರುತ್ತೇವೆ"

ಹೀಗೆ ಘೋಷಿಸಿದ ಅಂಬೇಡ್ಕರ ಸಂವಿಧಾನವನ್ನು ರಚಿಸುವ ಮುಖ್ಯ ವಾಸ್ತು ಶಿಲ್ಪಿಯಾಗಿ ನೇಮಿತರಾದರು [1947 ಅಗಸ್ಟ 29]

ಸಂವಿಧಾನವನ್ನು ರಚಿಸಲು ಏಳು ಸದಸ್ಯರ ಮಂಡಳಿ ನಿಯೋಜಿತವಾಗಿದ್ದರೂ ಕೂಡ ಸಂವಿಧಾನವನ್ನು ರಚಿಸಿದ ಸಂಪೂರ್ಣ ಹೆಗ್ಗಳಿಕೆ ಸಲ್ಲುವದು ಅಂಬೇಡ್ಕರರಿಗೆ ಏಕೆಂದರೆ ರಾಜ್ಯಾಂಗರಚನೆಯ ಸಭೆಯ ಸದಸ್ಯರಲ್ಲಿ ಒಬ್ಬ ರಾಜೀನಾಮೆ ನೀಡಿದ್ದ ಇನ್ನೊಬ್ಬ ಅಮೇರಿಕಾಕ್ಕೆ ಹೋಗಿದ್ದ. ಇನ್ನುಳಿದವರು ಪ್ರಾಂತೀಯ ರಾಜಕೀಯದಲ್ಲಿ ಮಗ್ನರಾಗಿದ್ದು ದೆಹಲಿಯಿಂದ ಹೊರಗಿದ್ದು ಅನಾರೋಗ್ಯದಿಂದಲೂ, ನಿರಾಸಕ್ತಿಯಿಂದಲೂ ಅವರೆಲ್ಲ ಭಾಗಿಯಾಗದೆ ಇರುವುದರಿಂದ ಅವರ ಸಂಪೂರ್ಣ ಜವಾಬ್ದಾರಿ ಅಂಬೇಡ್ಕರರ ಮೇಲೆ ಬಿತ್ತು.

1948 ರ ಫೆಬ್ರವರಿ ತಿಂಗಳಲ್ಲಿ ರಾಜ್ಯಾಂಗ ಸಭೆಯ ಅಧ್ಯಕ್ಷರಿಗೆ ಈ ಸಂವಿಧಾನದ ಕರಡುಪ್ರತಿ ಒಪ್ಪಿಸಿದ ಅಂಬೇಡ್ಕರರು ಆರು ತಿಂಗಳವರೆಗೆ ಸಾರ್ವಜನಿಕ ಅಭಿಪ್ರಾಯ ಸಂಗ್ರಹಣೆಗಾಗಿ ಅವಧಿ ನೀಡಿ 1948 ರ ನವೆಂಬರ ತಿಂಗಳಿನಲ್ಲಿ (4 ನೇ ತಾ||) ಸಂವಿಧಾನ ರಚನಾ ಸಭೆಯಲ್ಲಿ 395 ಪರಿಚ್ಛೇಧ ಹಾಗೂ 8 ನಿಬಂಧನೆ ಹೊಂದಿದ ಸಂವಿಧಾನವನ್ನು ಮಂಡಿಸಿದರು.

ಅಮೇರಿಕಾ ಹಾಗೂ ಇಂಗ್ಲೆಂಡಿನ ಸಂವಿಧಾನದ ಹಲವಾರು ಅಂಶಗಳನ್ನು ಹೊಂದಿದ ಭಾರತದ ಸಂವಿಧಾನವು ಈ ಎರಡು ಸಂವಿಧಾನಗಳ ಸುಂದರ ಸಮ್ಮಿಲನ ವಾಗಿದೆ. ಹಂಸಕ್ಷೀರ ನ್ಯಾಯದಂತೆ ಈ ಸಂವಿಧಾನದಲ್ಲಿ ಕೇವಲ ಒಳ್ಳೆಯ ಅಂಶ ವನ್ನಷ್ಟೇ ಆಯ್ಕೆ ಮಾಡಿಕೊಳ್ಳಲಾಗಿದ್ದು ವ್ಯವಸ್ಥಿತವಾಗಿ ಈ ಸಂವಿಧಾನವನ್ನು ನಿರ್ಮಿಸಲಾಗಿದೆ ಎಂದು ಹೇಳಿದ ಅಂಬೇಡ್ಕರರು ಜನರಿಗೆ ಸಂಕುಚಿತ ಮನೋಭಾವ ಜಾತೀಯತೆಯ ನೀತಿಯನ್ನು ಅಜ್ಞಾನವನ್ನು ಹೋಗಲಾಡಿಸುವದಕ್ಕೆ ಕರೆಕೊಟ್ಟರು

ಈ ಸಂದರ್ಭದಲ್ಲಿಯೇ ಅಂಬೇಡ್ಕರರು ಸಂವಿಧಾನವನ್ನು ಕುರಿತು " ಸಂವಿಧಾ-ನದ ಕೆಲಸಕಾರ್ಯ ತಪ್ಪಾದರೆ ಅದು ಕೆಟ್ಟ ಸಂವಿಧಾನವೆಂದು ಅರ್ಥವಲ್ಲ ಕಾರ್ಯಗತ ಮಾಡುವವರು ಅಧಮರು ಎಂದು ಅರ್ಥ " ಎಂದು ವಿವರಿಸಿದರು

1948 ರ ನವೆಂಬರ 26 ರ ಸಂವಿಧಾನ ಒಪ್ಪಿಗೆಯ ಕೊನೆಯ ಭಾಷಣದಲ್ಲಿ "ವ್ಯಕ್ತಿ ಸ್ವಾತಂತ್ರ್ಯವನ್ನು ಬಲಿಕೊಟ್ಟು ಕೃತಜ್ಞನಾಗಬಾರದು. ಯಾವ ಹೆಣ್ಣೂ ಶೀಲವನ್ನು ಬಿಟ್ಟು ಕೃತಜ್ಞಳಾಗಲಾರಳು ಯಾವನೊಬ್ಬ ತನ್ನ ಸ್ವಾತಂತ್ರ್ಯ ಬಲಿ ಕೊಟ್ಟು ಕೃತಜ್ಞತೆ ತೋರಬಾರದು.'' ಎಂದು ಪ್ರಜಾ ಪ್ರಭುತ್ವವನ್ನು ಉಳಿಸಿಕೊ-ಳ್ಳಲು ಕರೆಕೊಟ್ಟರು.

" ಕರ್ಮಣ್ಯೇವ ಅಧಿಕಾರಸ್ಯೆ ಮಾ ಫಲೇಷು ತದಾಚನ '' ಎಂಬಂತೆ. ಗಂಧದ ಕೊರಡು ತನ್ನನ್ನು ತಾನೇ ಸವೆಸಿಕೊಂಡು ಸುಗಂಧ ನೀಡುವಂತೆ. ದೀಪವು ತನ್ನನ್ನೆ ತಾನು ದಹಿಸಿಕೊಂಡು ಬೇರೆಯವರಿಗೆ ಬೆಳಕನ್ನು ನೀಡುವಂತೆ ತನ್ನವರನ್ನೆಲ್ಲ ಕಳೆದು ಕೊಂಡು ತನ್ನ ದೇಶಕ್ಕಾಗಿ ಅಹರ್ನಿಶಿದುಡಿದು, ಸ್ವತಂತ್ರ ಭಾರತಕ್ಕೆ ರಾಜ್ಯಾಂಗದ ಕೈಪಿಡಿಯನ್ನು ನೀಡಿದ ಅಂಬೇಡ್ಕರರು ಆಧುನಿಕ ಭಾರತದ ಮನು ಭಾರತದ ಮ್ಯಾಡಿಸನ್.

ಅಂಧಕಾರದಲ್ಲಿ ಜನಿಸಿದರೂ ಸ್ವ ಪ್ರತಿಭೆಯಿಂದ ಒಂದೊಂದೆ ಮೆಟ್ಟಲನ್ನು ಏರಿ ಕೀರ್ತಿಯ ಶಿಖರವನ್ನು ತಲುಪಿದ ಅಂಬೇಡ್ಕರ ಜ್ಞಾನದೇಗುಲದ ಬೀಗಮುದ್ರೆ ಒಡೆದು ಒಳಪ್ರವೇಶಿಸಿದ ಅಂಬೇಡ್ಕರ್

ಡಿಸೆಂಬರ್ 5 ರ 11.15 ಕ್ಕೆ ಭಜನೆಮಾಡುತ್ತ ಮಾಡುತ್ತ ದೇಹತ್ಯಾಗ ಮಾಡಿದರೂ ಇಂದು ಅವರ ಕೆಲಸ ಕಾರ್ಯದಿಂದ ಚಿರಂಜೀವಿಗಳಾಗಿದ್ದಾರೆ, " ಭಾರತ ರತ್ನ " ಅಂಬೇಡ್ಕರ ಜನಿಸಿ ಶತಮಾನ ಗತಿಸಿದರೂ ಭಾರತ ಮಾತೆಯ ಮಡಿಲಮಗುವಾದ ಅಂಬೇಡ್ಕರ ಸಂವಿಧಾನದ ರೂವಾರಿ ದೀನ ದಲಿತರ ಕೈವಾರಿ,

ಇವರ ಅವಿರತ ಶ್ರಮದ ಫಲ, ಅಹರ್ನಿಶಿ ದುಡಿತ ವಿವಿಧ ದೇಶಗಳ ಜ್ಞಾನವನ್ನು ಒಂದೆಡೆ ಸೇರಿಸಿದ ಪರಿ ಬಡವರ, ದಲಿತರ, ಭಾರತದ ಏಳ್ಗೆಗಾಗಿ ಶ್ರಮಿಸಿದ ರೀತಿಯಿಂದಾಗಿ ಅವರು ಅಮರರಾಗಿದ್ದಾರೆ.

"ಸೂರ್ಯ ತೇಜವನ್ನು ಮಾಡುವುದು ಸುಲಭವೇ ? ಹೀನ ಜಾತಿಯಲ್ಲಿ ಜನಿಸಿದ್ದರೂ ಕೂಡ ಮಾನವ ಗುಣಗಳ ಸಾಕಾರ ಮೂರ್ತಿಯಾದ ಅಂಬೇಡ್ಕರರು ತಮ್ಮ ಸೇವೆಯಿಂದಾಗಿ ಹಲವಾರು ವಿಶ್ವವಿದ್ಯಾಲಯದಿಂದ ಪದವಿಪಡೆದರು, ಜನರಿಂದ ಸಂವಿಧಾನಶಿಲ್ಪಿ, ಆಧುನಿಕಮನು ಭಾರತದ ಮ್ಯಾಡಿಸನ್ ಎಂಬ ಬಿರುದು ಪಡೆದರು.

---

## ಬೆ ಳ ಕು

ಸಿದ್ಧರಾಜು ಐವಾನ್ ತುಮಕೂರು-2

ನಾ-
ನೊಂದು ಬೆಂದು
ನಡೆ ನಡೆದು
ದಾರಿಕಾಣದೇ
ಕಲ್ಲು ಮುಳ್ಳುಗಳ ತುಳಿಯುತ
ಸಾವಿಲ್ಲದ ನೋವು ಅನುಭವಿಸುತ್ತಾ
ಇರಲು,
ದೂರದಿಂದಲೇ
ಕಂಡೆ ನೊಂದು
ದಿವ್ಯ ಜ್ಯೋತಿಯನ್ನ
ಕಾಣುತಿಹುದೇ
ನೊಂದ ಜೀವಿಗೆ
ನೆಮ್ಮದಿ ತರುವ ಆಶಾಕಿರಣ
ನಿಷೆಯಲ್ಲೂ ಉಷೆಯ ಹರಿಸುವ
ವರ್ಷ ದಿಂದ ವರ್ಷವೂ
ಬೆಳಕು ಮೂಡಿಸುವ
ಆ ನಂದಾ ದೀಪವೇ
" ಶ್ರೀ ಸಿದ್ಧಗಂಗಾ ಕ್ಷೇತ್ರ "

# ಕಡಿಮೆ ಹಣ ಖರ್ಚು ಮಾಡಿ

# ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

**'ಕಸ್ತೂರಿ' ಬಾರ್ ಸೋಪ್** — **'ಕಸ್ತೂರಿ' ನೀಲಂ ಬಾರ್ ಸೋಪ್**

ಪೂರಕರು :

## ರಾಮಕೃಷ್ಣ ಆಯಿಲ್ ಮಿಲ್, ತುಮಕೂರು

# ಜ್ಞಾನಕ್ಕೆ ಜಾತಿಯ ಬಂಧನವಿಲ್ಲ

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯು, ಅಂಚೆ ; ಮಚ್ಚಿನ - 574 295 (ದ.ಕ.)

ಬಹು ಹಿಂದಿನ ಕತೆ. ಕಠಿಣ ತಪಶ್ಚರ್ಯೆಯಿಂದ ಮಹಾ ಸಾಧಕನೆನಿಸಿದ ಮಹರ್ಷಿಯೊಬ್ಬನು ಘೋರಾರಣ್ಯದಲ್ಲಿ ಬ್ರಾಹ್ಮಣ ವಟುಗಳಿಗೆ ವೇದಪಾಠ ಬೋಧಿಸಿಕೊಡಿದ್ದ. ಆಮಹರ್ಷಿಗೆ ಇಬ್ಬರು ಹೆಂಡತಿಯರು. ಒಬ್ಬಳು ಬ್ರಾಹ್ಮಣ ಕನ್ಯೆಯಾದರೆ ಮತ್ತೊಬ್ಬಳು ಶೂದ್ರ ಜಾತಿಯವಳು. ಅವಳ ಹೆಸರು ಇತೆರಾ. ಪರಮ ಸುಂದರಿಯಾದ ಶೂದ್ರ ತರುಣಿಯನ್ನು ಮದುವೆಯಾಗಿ ಮಹರ್ಷಿಯು ಆಶ್ರಮದ ಹೊರಗಿನ ಒಂದು ಪರ್ಣಶಾಲೆಯಲ್ಲಿ ತಂದಿರಿಸಿಕೊಂಡಿದ್ದ. ಆವನಿಗೆ ಆವಳಲ್ಲಿ ಒಬ್ಬ ಮಗನೂ ಬ್ರಾಹ್ಮಣ ಕನ್ಯೆಯಲ್ಲಿ ಒಬ್ಬ ಮಗನೂ ಜನಿಸಿದ್ದರು.

ಮಹರ್ಷಿಯ ಇಬ್ಬರು ಮಗಂದಿರು ಬೆಳೆದು ದೊಡ್ಡವರಾದರು. ಅವರನ್ನು ಯೋಗ್ಯ ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಕಳುಹಿಸಬೇಕಾದ ವಯಸ್ಸಿಗೆ ಬಂದರು ಆ ಕಾಲದಲ್ಲಿ ಪ್ರತಿನಿತ್ಯ ಋಷಿಮುನಿಗಳು ಯಾಗಕುಂಡದಲ್ಲಿ ಯಾಗ ಮಾಡುತ್ತಿದ್ದರು ಬಳಿಕ ಯಾಗಕುಂಡದ ಸುತ್ತಲೂ ವಿದ್ಯಾರ್ಥಿಗಳನ್ನು ಕುಳ್ಳಿರಿಸಿ ಅವರಿಗೆ ವಿದ್ಯಾದಾನ ಮಾಡುವುದು ಪದ್ಧತಿಯೂ ಆಗಿತ್ತು. ಮಹರ್ಷಿಯ ಬ್ರಾಹ್ಮಣ ಪತ್ನಿ ತನ್ನ ಮಗನನ್ನು ಯಾಗಶಾಲೆಗೆ ಕರೆತಂದು ಶಿಕ್ಷಣ ಪಡೆಯಲು ಯಾಗ ಕುಂಡದೆದುರು ಅವನನ್ನು ಕೂರಿಸಿದಳು. ಇತೆರಾ ಇದನ್ನು ಕಂಡು ಲಗುಬಗೆಯಿಂದ ತನ್ನ ಮಗನನ್ನು ಯಾಗಶಾಲೆಯ ಬಳಿ ಕರೆದುಕೊಂಡು ಬಂದಳು.

ಅದನ್ನು ಕಂಡು ಮಹರ್ಷಿಯು ಶೂದ್ರ ಸ್ತ್ರೀಯು ಯಾಗಶಾಲೆಯೊಳಗೆ ಬಂದು ಅಪವಿತ್ರಗೊಳಿಸುತ್ತಾಳೆಂದು ಅರಿತು ಅವಳು ಯಾಗಶಾಲೆಯೊಳಗೆ ಬರುವುದೇ ಬೇಡವೆಂದು ತಿಳಿಸಿದ, ಆಗ ಇತೆರಾ ತನ್ನ ಮಗನನ್ನು ವಿದ್ಯೆ ಕಲಿಯಲು ಕರೆತಂದಿರುವುದಾಗಿ ತಿಳಿಸಿದಳು. ಆದರೆ ಮಹರ್ಷಿಯು "ಶೂದ್ರ ಸ್ತ್ರೀಗೆ ನನ್ನಿಂದ ಜನಿಸಿದ ಮಗನಾದರು ಅವನಿಗೆ ವಿದ್ಯೆ ಕಲಿಸಲು ನನ್ನಿಂದ ಸಾಧ್ಯವಿಲ್ಲ. ಅವನನ್ನು ಇಲ್ಲಿಂದ ಓಡಿಸಿ" ಎಂದು ಶಿಷ್ಯರಿಗೆ ಹೇಳಿದ.

ಸುಕುಮಾರನಾದ ಇತೆರಾಳ ಮಗನಿಗೆ ಅದರಿಂದ ಉತ್ಸಾಹಭಂಗವಾಯಿತು ಎಲ್ಲರಂತೆ ತಾನೂ ವಿದ್ಯೆಕಲಿಯಬೇಕೆಂಬ ಶ್ರದ್ಧೆ ಅವನಲ್ಲಿ ಉಕ್ಕುತ್ತಿತ್ತು. ಆದರೆ ತಂದೆಯಾಡಿದ ಮಾತುಗಳಿಂದ ಅವನ ಮನಸ್ಸೆಂಬ ಹೂವನ್ನು ಕಾಲಿನ ಕೆಳಗೆ ಹಾಕಿ ಹೊಸಕಿದಂತಾಯಿತು. ಆವನು ಗಳಗಳನೆ ಅಳುತ್ತಾ ತಾಯಿಯ ಕೊರಳನ್ನು

ಬಳಸಿ ಹಿಡಿದು, "ಅಮ್ಮಾ ನನ್ನ ಅಪ್ಪ ತಪೋನಿಧಿಯಾದ ಮಹರ್ಷಿಗಳಾದರೂ ಶೂದ್ರ ಸ್ತ್ರೀಯ ಗರ್ಭದಿಂದ ಜನಿಸುವುದೇ ಅಪರಾಧವಲ್ಲವೇ ಅಮ್ಮಾ ? ಈ ಅಪರಾಧವಿಂದಾಗಿ ಜೀವನವಿಡೀ ನಾನು ವಿದ್ಯೆ ಕಲಿಯದೆ ಅನಾಗರಿಕನಾಗಿ ಬಾಳಲೇಬೇಕೇನಮ್ಮಾ" ಎಂದು ಕಲ್ಲೂ ಕರಗುವಂತೆ ಕೇಳಿದ.

ಇತೆರಾಗೆ ದುಃಖ ಉಮ್ಮಳಿಸಿ ಬಂತು. ಆದರೆ ಮಗನ ಯಾವ ಪ್ರಶ್ನೆಗೂ ಆಕೆ ಉತ್ತರಿಸದೆ ಮೌನವಾಗಿದ್ದು ಬಿಟ್ಟಳು. ಆದರೂ ಅವಳನ್ನು ಮೌನವಾಗಿಯೇ ಉಳಿಯಲು ಬಿಡಲಿಲ್ಲ – ಅಂದು ನಡೆದ ಗಾಯದ ಮೇಲೆ ಬರೆ ಎಳೆಯುವಂತಹ ಇನ್ನೊಂದು ಘಟನೆ.

ಮರುದಿನ ಯಾಗಕ್ಕಾಗಿ ಆರಣಿಗಳನ್ನು ಸಂಗ್ರಹಿಸಿ ತರಲು ಇತೆರಾ ಮಗನ ವಯಸ್ಸಿನ ವಟುಗಳೆಲ್ಲರೂ ಅರಣ್ಯಕ್ಕೆ ಹೊರಟರು. ಅವನೂ ನಡೆದುದನ್ನು ಮರೆತು ಉತ್ಸಾಹದಿಂದ ಅವರನ್ನು ಹಿಂಬಾಲಿಸಿ ಹೊರಟ. ಎಲ್ಲರಿಗಿಂತ ಹೆಚ್ಚು ಸಮಿಧೆಗಳನ್ನು ಕಡಿದು ಸಂಗ್ರಹಿಸಿದ. ಅದನ್ನು ಕಂಡು ಅವರೆಲ್ಲ ಅವನನ್ನು ಗೇ ಮಾಡಿ ನಗಲಾರಂಭಿಸಿದರು. "ಯಾಕೆ ನಗುತ್ತಿದ್ದೀರಾ ?" ಆತ ಅಸಹನೆಯಿಂ ಕೇಳಿದ. "ಬೇರೇನಿಲ್ಲ; ನೀನು ಸುಮ್ಮನೆ ಶ್ರಮಪಡುತ್ತಿರುವೆ. ಎಷ್ಟು ಒದ್ದಾಡಿ ಸಮಿಧ ಸಂಗ್ರಹಿಸಿದರೂ ನಿರರ್ಥಕ ಬನ್ನಿ" ಎಂದರು ಜೊತೆಯವರು. "ಯಾಕೆ, ನಾನ ನಿಮಗಿಂತ ಹೆಚ್ಚು ಸಂಗ್ರಹಿಸಿಲ್ಲವೆ ?" ಎಂದು ಆತ ಕೇಳಿದ.

ಇರಬಹುದು. ಆದನ್ನು ಹೊತ್ತುಕೊಂಡುಯಾಗಶಾಲೆಗೆ ಹೋಗಬಹುದು ಆದರೆ ಅಲ್ಲಿ ಯಾಗಶಾಲೆಗೆ ಪ್ರವೇಶಿಸಲು ನಿನ್ನನ್ನು ಬಿಡುತ್ತಾರೆಯೆ ? ಈ ಸಮಿಧೆಗಳನ್ನು ಬಳಸಿ ನಾಳೆ ಯಾಗ ಮಾಡುತ್ತಾರೆಯೆ ? ಇಲ್ಲವೆಂದಮೇಲೆ ಶ್ರಮ ನಿರರ್ಥಕ ಅಲ್ಲವೆ ?" ಎಂದು ಅವರೆಂದರು.

"ಯಾಕೆ ?" ಅವನು ಅಮಾಯಕನಂತೆ ಕೇಳಿದ. ಗಹಗಹಿಸಿ ನಕ್ಕರ ಎಲ್ಲರೂ. "ಯಾಕೆ ಅಂದರೆ ನೀನು ಶೂದ್ರಸ್ತ್ರೀಯಮಗ; ಅಪವಿತ್ರ! ನೀನು ಮುಟ್ಟಿ ಸಮಿಧೆ ಏತಕ್ಕೂ ಬೇಡ"

ಹುಡುಗನಲ್ಲಿದ್ದ ಸ್ವಾಭಿಮಾನ ಭುಗಿಲೆದ್ದಿತು. ನೂರು ಸುತ್ತಿಗೆಯಿಂದ ನೆತ್ತಿ ಬಡಿದಂತಾಯಿತು. ಸಮಿಧೆಯನ್ನು ಅಲ್ಲೇ ಎಸೆದು ತಾಯಿಯ ಬಳಿಗೆ ಓಡಿ ಬಂ "ಅಮ್ಮಾ, ಈ ಜಾತಿ ಹೀನತೆ ಹೊತ್ತು ಸಾಯುವವರೆಗೊ ಇರಬೇಕೆ ? ಎಂದ ಮೈಯಲುಗಿಸಿ ಕೇಳಿದ.

“ಮಗೂ, ನೀನು ಅಂತಹ ನಿರ್ಭಾಗ್ಯನಲ್ಲವಪ್ಪಾ. ನಿನ್ನ ತಂದೆ ಅಖಂಡ ಜ್ಞಾನನಿಧಿ. ಅವರು ನಿನಗೆ ವಿದ್ಯೆಯನ್ನೂ ಬೋಧಿಸಲು ನಿರಾಕರಿಸಿದರೇನಾಯಿತು ಬಿಡು. ನಾನು ಶೂದ್ರಳಾದರೇನಂತೆ, ಭೂಮಿಕನ್ಯೆ ಅಲ್ಲವೆ ? ನಿನ್ನನ್ನು ವಿದ್ಯಾವಂತನನ್ನಾಗಿ ಮಾಡಲು ಆ ತಾಯಿಯೊಂದಿಗೇ ಕೋರಿಕೊಳ್ಳುತ್ತೇನೆ. ಜ್ಞಾನಾನಿಧಿಯಾದ ಧರಿತ್ರಿಯು ತನ್ನ ಪ್ರೇಮ, ದಯೆಗಳ ಧಾರಾಮೃತದಿಂದ ನಿನ್ನನ್ನು ಉದ್ಧರಿಸುತ್ತಾಳೆ ಖಂಡಿತ” ಎಂದು ಇತೆರಾ ನಾನಾ ಬಗೆಯಿಂದ ನೊಂದ ಮಗನಿಗೆ ಸಾಂತ್ವನ ಹೇಳಿದಳು. ಬಳಿಕ ಅಖಂಡ ಭಕ್ತಿಯಿಂದ ಪೃಥ್ವಿಯನ್ನು ಸುತ್ತಿಸಿದಳು. “ಅಮ್ಮಾ ನೀನೊಲಿಯದಿದ್ದರೆ ನಾವಿಬ್ಬರೂ ಪ್ರಾಣತ್ಯಾಗ ಮಾಡಿಕೊಳ್ಳುತ್ತೇವೆ, ಆ ಪಾತಕ ನಿನಗೆ ” ಎಂದಳು.

ಆ ಸ್ತುತಿಯಿಂದ ಸಂಪ್ರೀತಳಾದ ಭೂತಾಯಿಯು ಪ್ರತ್ಯಕ್ಷಳಾಗಿ, “ಇತೆರಾ, ಚಿಂತಿಸಬೇಡ. ಲೋಕದ ಸಮಸ್ತ ಜ್ಞಾನವನ್ನು ನನ್ನ ಒಡಲಲ್ಲಿ ಹುದುಗಿಸಿಕೊಂಡಿದ್ದೇನೆ. ಈ ಜ್ಞಾನಾಮೃತವನ್ನು ನಿನ್ನ ಮಗನಿಗೆ ಧಾರೆಯೆರೆದು ಸಕಲ ವಿದ್ಯೆಗಳಲ್ಲೂ ಅವನನ್ನು ಪರಿಣತನನ್ನಾಗಿ ಮಾಡುತ್ತೇನೆ. ಅವನನ್ನು ನನ್ನ ವಶಕ್ಕೆ ಕೊಡು” ಎಂದಳು. ಇತೆರಾ ಆ ಭೂಮಿತಾಯಿಯ ತೆರೆದ ವಿಶಾಲ ಒಡಲೊಳಗೆ ಮಗನನ್ನು ಹೊಗಿಸಿಬಿಟ್ಟಳು. ಅಲ್ಪಾವಧಿಯಲ್ಲಿ ಅವನು ವಿದ್ಯಾಪಾರಂಗತನಾಗಿ ತಾಯಿಯ ಬಳಿಗೆ ಬಂದು ಅವಳನ್ನು ಸಂತೋಷ ಪಡಿಸಿದ.

ಹೀಗೆ ಜ್ಞಾನವೆಂಬುದು ಜಾತಿಯ ಸೊತ್ತಲ್ಲ; ಅದನ್ನು ಗಳಿಸುವ ಶ್ರದ್ಧಾ, ಭಕ್ತಿಗಳಿದ್ದರೆ ಯಾರಿಗೂ ಅದು ಒಲಿಯುತ್ತದೆ ಎಂಬ ಮಹತ್ವದ ನೀತಿಯನ್ನು ಸಾರಿದ ಆ ಬಾಲಕ ಅನಂತರ ಎಲ್ಲರಿಂದ ಮಾನ್ಯತೆ ಪಡೆದ; ಗೌರವಾನ್ವಿತನಾದ. ಮುಂದೆ ಋಗ್ವೇದದ “ಐತರೇಯ ಬ್ರಾಹ್ಮಣ” ವನ್ನು ರಚಿಸಿದ ಅವನನ್ನು ಎಲ್ಲರೂ ಐತರೇಯ ಋಷಿಯೆಂದೇ ಕರೆದರು.

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ “ಸಿದ್ಧಗಂಗಾ” ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

# ರಾಜಕೀಯ ವಿಫಲತೆಗೆ ಧರ್ಮ ನಿರಪೇಕ್ಷತೆಯೇ ಕಾರಣ

ಇಲ್ಲಿ ಧರ್ಮ ಧರ್ಮವೆಂದೊಡನೆ ಹಿಂದೂ ಧರ್ಮ, ಕ್ರೈಸ್ತಧರ್ಮ, ಮಹಮ್ಮದೀಯ ಅಂದರೆ ಮುಸಲ್ಮಾನ ಧರ್ಮ, ಜೈನಧರ್ಮ, ಸಿಖ್ಖಧರ್ಮ ಇತ್ಯಾದಿ ಯಾವುದೇ ಒಂದು ಜಾತಿಯ, ಗುಂಪಿನ, ವರ್ಗದ ಸಮುದಾಯದ ಸೀಮಿತದೊಳಗೆ ಅಂಟಿಕೊಂಡಿದೆ – ಎಂಬ ಭ್ರಮಾತ್ಮಕ ಕಲ್ಪನೆಯೇ, ಧರ್ಮದ ವಿಷಯದಲ್ಲಿ ತಿಳಿದುಕೊಂಡ ಸಂಕುಚಿತ ಭಾವನೆಯೇ ಬಹುಜನರ ಮಸ್ತಿಷ್ಕದಲ್ಲಿ ತುಂಬಿಕೊಂಡಿದೆ. ಧರ್ಮವು ಸರ್ವಕಾಲಿಕವೂ ತ್ರಿಕಾಲಾಬಾಧಿತವೂ ಆಗಿರುವ ಸರ್ವವ್ಯಾಪಕತತ್ವ. ವೇದಾದಿ ಸಮಸ್ತಸತ್ ಶಾಸ್ತ್ರಗಳಲ್ಲಿ ವರ್ಣಿಸಲ್ಪಟ್ಟಿರುವ ಧರ್ಮದ ವ್ಯಾಪಕತೆಯನ್ನು ಗಂಭೀರತೆಯನ್ನು ಆಳವಾಗಿ ಅಧ್ಯಯನ ಮಾಡಿದಾಗ ಮಾನವ ಸಮುದಾಯದ ಸರ್ವತೋಮುಖ ಅಭ್ಯುದಯ ಅಂದರೆ ಇಹಕ್ಕೂ ಪರಕ್ಕೂ ಸಾಧನವಾಗಿ ಪಥ ಪ್ರದರ್ಶನ ಮಾಡುವ ಪರಮ ವೈಜ್ಞಾನಿಕವೂ ದಾರ್ಶನಿಕವೂ ಆದ ಪವಿತ್ರ ತತ್ವವೇ ಆಗಿದೆ ಎಂದು ತಿಳಿಯಬಹುದು. ಅದಲ್ಲದೆ ಸಮಗ್ರ ಮಾನವ ಜನಾಂಗವು ಯಾವುದನ್ನು ಧಾರಣೆ ಮಾಡಿಕೊಂಡು ಸರಿಯಾದ ರೀತಿಯಲ್ಲಿ ಯೋಗ್ಯವಾದ ರೀತಿಯಲ್ಲಿ ಸರ್ವರ ಹಿತವನ್ನೇ ಬಯಸುತ್ತಾ ಸರ್ವಕಲ್ಯಾಣಕ್ಕಾಗಿ ಮಾಡುವ ಕರ್ತವ್ಯ ಕರ್ಮಗಳೇ ಧರ್ಮ ಎಂಬ ಹೆಸರಿನಿಂದ ಕರೆಯಲಾಗಿದೆ. ಇದನ್ನು ನಿರ್ದಿಷ್ಟವಾದ ಸರ್ವರಿಗೂ ಅನ್ವಯವಾಗುವ ಯಾವುದೇ ಜಾತಿ-ಮತ ಪಂಥದ ಅಥವಾ ಸಮುದಾಯದವರಿಗೆ ಅಥವಾ ಯಾವುದೇ ದೇಶದವರಿಗೆ ಏನೊಂದೂ ಬಾಧಕ ಬಾರದ ರೀತಿಯಲ್ಲಿ ಆತ್ಮನ ಉತ್ಕೃಷ್ಟವಾದ ಏಳಿಗೆಗಾಗಿ ಹತ್ತು ಲಕ್ಷಣಗಳಿಂದ ಕೂಡಿ ಬೋಧಿಸಲ್ಪಟ್ಟಿದೆ. ಇದು ಬಡವ ಬಲ್ಲಿದನೆಂಬ ಭೇದವಿಲ್ಲದೆ ಸಾಮಾನ್ಯ ಪ್ರಜೆಗಳಿಂದ ಹಿಡಿದು, ರಾಜಗದ್ದುಗೆಯಲ್ಲಿ ಮೇರೆದಾಡುವ ಮಹೋನ್ನತ ಪದವಿಯ ರಾಷ್ಟ್ರನಾಯಕರಿಗೂ ಅನ್ವಯಿಸುವುದಾಗಿದೆ. ಇಂಥಾ ವಿಶಾಲ ವ್ಯಾಪಕತೆಯನ್ನುಳ್ಳ ಧರ್ಮವನ್ನು ಯಾವನು ಕಡೆಗಣಿಸುತ್ತಾನೋ ಆತನಿಗೆ ಇಹವು ಇಲ್ಲ ಪರವು ಇಲ್ಲ. ಧರ್ಮಕ್ಕೆ ಪ್ರಧಾನ ಸ್ಥಾನವನ್ನು ಕೊಟ್ಟಿರುವ ನಮ್ಮ ಭಾರತ ವರ್ಷದಲ್ಲಿ ಭಾರತೀಯರೆ ಆದ ನಾವು ಧರ್ಮದ ಸರ್ವ ವ್ಯಾಪಕತೆಯನ್ನು ತಿಳಿಯದೆ ಅದರ ಕಡೆಗೆ ವಿಮುಖರಾಗಿ ಸ್ವಾರ್ಥ ಲೋಲುಪತೆಯಿಂದ ಸಂಕುಚಿತವಾದ ತಮ್ಮ ತಮ್ಮ ಮತ ಸಂಪ್ರದಾಯಗಳಿಗೆ ಅನ್ವಯವಾಗುವಂತೆ ಅರ್ಥವಿಸಿಕೊಂಡು ಅದರ ಗೌರವ ಗರಿಮಗಳನ್ನೇ ಮೂಲೆ ಪಾಲಾಗಿ ಮಾಡಿ ಅದನ್ನು ಎತ್ತಿ ಹಿಡಿಯುವ ಅಥವಾ ರಕ್ಷಿಸುವ ಗೋಜಿಗೆ ಹೋಗದೆ ಇಷ್ಟಬಂದ ರೀತಿಯಲ್ಲಿ ನಡೆದುಕೊಳ್ಳುವ ಈ ನೀಚ ಭಾವನೆಯೇ ನಮ್ಮನ್ನೂ ನಮ್ಮ ಭಾರತವನ್ನೂ ಅಧೋಗತಿಗಿಳಿಯುವಂತೆ ಮಾಡಿದೆ.

ಇನ್ನಾದರೂ ಶ್ರೀಸಾಮಾನ್ಯರಿಂದ ಎಲ್ಲಾ ರಾಷ್ಟ್ರನಾಯಕರೂ ಸಹ ಧರ್ಮ ನಿರಪೇಕ್ಷತಾಭಾವನೆಯನ್ನು ಬದಿಗೊತ್ತಿ ವೈಯಕ್ತಿಕವಾಗಿಯೂ ಸಾಮಾಜಿಕವಾಗಿಯೂ ರಾಷ್ಟ್ರೀಯವಾಗಿಯೂ ಐಕತಾಭಾವನೆಯಿಂದ ವ್ಯವಸ್ಥಾಬದ್ಧವಾಗಿ ಧರ್ಮವನ್ನು ಪುನರ್‌ಸ್ಥಾಪಿಸುವುದು ಅತೀ ಅಗತ್ಯ.

ಎಷ್ಟರ ತನಕ ವ್ಯಕ್ತಿಯಾಗಲಿ, ಸಮಾಜವಾಗಲಿ, ರಾಷ್ಟ್ರವಾಗಲಿ, ಈ ಸಾರ್ವಭೌಮ ಧರ್ಮವನ್ನು ಎತ್ತಿ ಹಿಡಿಯುವುದಿಲ್ಲವೋ ಅದರ ಆಧಾರದಲ್ಲಿಯೇ ರಾಷ್ಟ್ರದ ನಿರ್ಮಾಣವನ್ನು ರೂಪಿಸುವುದಿಲ್ಲವೋ ಅಷ್ಟರ ತನಕ ಯಾವ ಪ್ರಜೆಗೂ ಹಿತವಾಗದು. ಈ ಧರ್ಮವನ್ನು ಕಡೆಗಣಿಸಿದ ಯಾವರಾಷ್ಟ್ರವೂ ಶಾಂತಿಯಿಂದ ನೆಮ್ಮದಿಯಾಗಿ ಬಾಳಿಲ್ಲ. ಅಶಾಂತಿ ತುಂಬಿ ಪ್ರಜೆಗಳು ದುಃಖಿತರಾಗಿ ಪಡುವ ಕಷ್ಟವನ್ನು ಧರ್ಮವಿಮುಖವಾದ ಕೆಲವೇ ರಾಕ್ಷಸೀ ಶಕ್ತಿಗಳೇ ದುರುಪಯೋಗದಿಂದ ರಾಜ್ಯಭಾರ ಮಾಡುತ್ತಿರುವ ವಿಷಯ ಪತ್ರಿಕೆಗಳಲ್ಲಿ ದಿನ ಬೆಳಗಾದರೆ ಸುದ್ಧಿ ಸಮಾಚಾರವನ್ನು ನಾವು ನೋಡುತ್ತಿದ್ದೇವೆ. ನಮ್ಮ ನೆರೆಯ ರಾಷ್ಟ್ರವಾದ ಪಾಕಿಸ್ಥಾನವು ಇಸ್ಲಾಮಿನ ತತ್ವದ ಮೇಲೆ ತನ್ನ ರಾಜ್ಯವನ್ನು ಕಟ್ಟುವುದಾಗಿ ಘೋಷಿಸುತ್ತಿದೆ. ಆದರೆ ಬೇರೆ ಬೇರೆ ರಾಷ್ಟ್ರದ ತತ್ವಗಳು ಧರ್ಮದ ಸಾರ್ವಭೌಮತೆಯನ್ನು ಹೊಂದಿಕೊಂಡಿಲ್ಲ. ಕೇವಲ ಭಾರತೀಯದರ್ಶನ ಶಾಸ್ತ್ರಗಳೇ ಧರ್ಮದ ಸರ್ವವ್ಯಾಪಕತೆಯನ್ನು ಎತ್ತಿ ಹಿಡಿದು ಬೆಳಗಿಸುತ್ತಾ ಬಂದಿವೆ.

ಇನ್ನಾದರು ನಮ್ಮ ರಾಷ್ಟ್ರನಾಯಕರು ತಮ್ಮ ತಮ್ಮೊಳಗಿರುವ ಎಲ್ಲಾ ಭೇಧ ಭಾವಗಳನ್ನು, ತಮ್ಮ ಗದ್ದುಗೆಯ ಪಟ್ಟಭದ್ರ ಶಕ್ತಿಗಳಿಗಾಗಿ ನಡೆಸುವ ಹೊಡೆದಾಟಗಳನ್ನೂ ಭೋಗವಿಲಾಸತೆಯನ್ನು ಬದಿಗೊತ್ತಿ ಪೂರ್ಣ ತ್ಯಾಗ ಭಾವನೆಯಿಂದ ಕಂಗೊಳಿಸುವ ಧರ್ಮದ ತಳಹದಿಯಲ್ಲಿ ರಾಷ್ಟ್ರವನ್ನು ಕಟ್ಟಬಾರದೆಕೋ ತಿಳಿಯದು. ರಾಷ್ಟ್ರೀಯ ಶಿಥಿಲತೆ ದಿನದಿಂದ ದಿನಕ್ಕೆ ಜನಸೇವೆಯನ್ನು ಅವನತಿಯ ಕಡೆಗೆ ಕೊಂಡೊಯ್ಯುತ್ತಿದೆ. ಇನ್ನಾದರೂ ನಾವು ಕಣ್ಣು ಬಿಡಬೇಡವೇ ? ಪ್ರಜಾ ಸಂಮೂಹವು ಇದರ ಸತ್ಯಾಸತ್ಯವನ್ನು ಎಷ್ಟು ಬೇಗ ಅರಿತುಕೊಳ್ಳುವುದೋ ಅಂದೆ ನಮ್ಮ ಭಾರತದ ಉನ್ನತಿ ಹಾಗೂ ಪ್ರಜೆಗಳ ಕಲ್ಯಾಣವಾದೀತು. ಎಂದು ತಿಳಿದು ಧರ್ಮ ನೀರಪೇಕ್ಷತೆಯನ್ನು ಆದಷ್ಟು ಬೇಗ ತ್ಯಜಿಸೋಣ. ರಾಷ್ಟ್ರವನ್ನು ಸುಭದ್ರವಾಗಿ ಬೆಳಗಿಸೋಣ.

ಕೃಪೆ:- **ವೇದಪ್ರಕಾಶ**

# ವಿದ್ಯಾರ್ಥಿಜೀವನದ ಬೆಳಕು ಸರಣಿ

ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ, ಮೈಸೂರು - 570 024

## ವ್ಯಾಸಂಗ ಸಮಯದಲ್ಲಿ ಅರಿತಿರಬೇಕಾದ ನೀತಿಗಳು :

ಶಿಷ್ಯವೃತ್ತಿಯು ಜೀವಿತದಲ್ಲಿ ಪರ್ವಕಾಲ. ಇದರ ಫಲ ಮುಂದೆ ಗೃಹಸ್ಥಾಶ್ರಮ ವಹಿಸುವ ಕಾಲದಲ್ಲಿ ತಿಳಿಯಬರುತ್ತದೆ, ಹೀಗಾಗಿ ಆ ಫಲವನ್ನು ಉಣ್ಣಲು ವಿದ್ಯಾರ್ಥಿಯಾಗಿರುವಾಗಲೇ ರೂಪಿಸಿಕೊಳ್ಳಬೇಕು.

ಶಾಲಾಕಾಲೇಜು ಅಧ್ಯಾಪಕರನ್ನು ವಿಧೇಯತೆಯಿಂದ ಗೌರವಿಸಿ, ಭಕ್ತಿ, ಪ್ರೀತಿ ಗಳಿಂದ ನಡೆದು ಆದರ್ಶ ವಿದ್ಯಾರ್ಥಿಗಳೆಂಬ ಕೀರ್ತಿ ಪಡೆಯಬೇಕು ತಾವು ಕಲಿ ಯುವ ಶಾಲಾ ಕಾಲೇಜುಗಳು ಪವಿತ್ರ ಮಂದಿಗರಳೆಂದು ತಿಳಿಯಬೇಕು, ನಿಮ್ಮ ವ್ಯಾಸಂಗ ಸಾಧನೆಗಳೆಲ್ಲಾ ಈ ಮಂದಿರಗಳಲ್ಲಿ ನಡೆಯಬೇಕಾಗಿರುವುದರಿಂದ ಯಾತ್ರಾ ಸ್ಥಳಗಳೆಂಬ ಗೌರವದಿಂದ ಕಾಣಬೇಕು.

ಸುಗುಣಗಳನ್ನು ಕಲಿಯುವ ಆಸಕ್ತಿಯನ್ನು ಬಿಡಬಾರದು ನಿಮ್ಮ ತಾಯ್ತಂದೆ ಗಳಾಗಲಿ, ಪೋಷಕರಾಗಲಿ ನಿಮ್ಮನ್ನು ಶಾಲಾ, ಕಾಲೇಜುಗಳಲ್ಲಿ ಸರಿಯಾಗಿ ಕಲಿಕೆ ಯಲ್ಲಿ ಶ್ರದ್ಧೆಯಿಂದ ನಿಗಾವಹಿಸಿ ಇರುವಿರೆಂದು ತಿಳಿದಿರುವುದರಿಂದಲೂ, ನೀವು ಸನ್ಮಾ ರ್ಗದಲ್ಲಿ ನಡೆಯುತ್ತಿರುವಿರಿ ಎಂದು ಭಾವಿಸಿರುತ್ತಾರೆ. ನಿಮ್ಮಲ್ಲಿ ದೋಷಗಳಿಲ್ಲವೆಂಬ ನಂಬಿಕೆ ಇಟ್ಟು ಅವರ ಪಾಡಿಗೆಅವರು ನೆಮ್ಮದಿಯಿಂದ ಇರುತ್ತಾರೆ. ಆದ್ದರಿಂದ ಆ ನಂಬಿಕೆಗಳಿಗೆ ವ್ಯತಿರಿಕ್ತವಾಗಿ ಹೋಗದೆ ವ್ಯಾಸಂಗದಲ್ಲಿ ಕ್ರಿಯಾಶಾಲಿಯಾಗಿರ ಬೇಕಾದ್ದು ನಿಮ್ಮ ಕರ್ತವ್ಯ.

ನಿಮ್ಮ ಹಿರಿಯರ ನಂಬಿಕೆಗಳಿಗೆ ವ್ಯತಿರಿಕ್ತವಾಗಿ ನಡೆದು, ದುರ್ಮಾರ್ಗಿಗಳೆಂದು ಅನ್ನಿಸಿಕೊಳ್ಳದ ರೀತಿಯಲ್ಲಿ ಸತ್ಕುಲ ಪ್ರಸೂತರಾಗಿರುವುದು ಉತ್ತಮ ಮಾರ್ಗ.

ನಿಮ್ಮ ಶಾಲಾಕಾಲೇಜುಗಳಲ್ಲಿ ನಡೆಸುವ ಸಭೆಗಳು, ಡ್ರಿಲ್ ಮತ್ತು ಕೂಟ ಗಳಲ್ಲಿ ಭಾಗವಹಿಸಿ ಅಲ್ಲಿ ನಡೆಸುವ ಕಾರ್ಯಗಳಲ್ಲಿ ಭಾಗಿಯಾಗಬೇಕಲ್ಲದೆ ಅವುಗಳ ಪ್ರಯೋಜನಗಳನ್ನು ಪಡೆಯಿರಿ. ದೇಶದಲ್ಲಿ ಮುಂದೆ ನೆಡೆಯಬಹುದಾದ ಆಗು ಹೋಗುಗಳ ವಿಚಾರ ಚಿಂತಿಸಿ, ನಿಮ್ಮ ಕಾಣಿಕೆ ಸಲ್ಲಿಸುವ ಮನೋಭಾವ ಹೊಂದಿರಿ ನೀವು ಎಂದಿಗೂ ಸಮಾಜ ಘಾತುಕ ಕೃತ್ಯಗಳಿಗೆ ಎಡೆಕೊಡಬೇಡಿರಿ. ಶ್ರದ್ಧೆ, ಆಸಕ್ತಿ ಶಿಸ್ತುಗಳಿಂದ ನಿಮ್ಮ ಭವಿಷ್ಯವನ್ನು ಸುಖಮಯವಾಗಿರುವಂತೆ ಜೀವನ ನೆಡೆಸುವ ಕ್ರಮವಹಿಸಿ.

ಮಾನವ ಸ್ವಭಾವ ಚಂಚಲ. ಅದನ್ನು ಸುಳ್ಳು ಮಾಡುವ ಕ್ರಮ ಮತ್ತು ಆತ್ಮ ಶಕ್ತಿಯನ್ನು ಬೆಳೆಸಿಕೊಳ್ಳಿ ವಿದ್ಯಾಭ್ಯಾಸ ಮುಂದುವರಿದಂತೆ ಮನಸ್ಸು ಪರಿಪಕ್ವವಾಗಬೇಕು. ಅದು ಯಾವ ಕಾರಣದಿಂದಾದರೂ ಹಿಮ್ಮೆಟ್ಟಿದರೆ ಮನಸ್ಸು ದುಷ್ಚಟಗಳಿಗೆ ಕಾರಣವಾಗುತ್ತದೆ. ಹತೋಟಿ ತಪ್ಪಿದರಂತೂ ಮೇಲೇರಿ ಬರಲಾಗದೆ ಕೊರಕಿನಲ್ಲಿ ಬಿದ್ದಂತೆ! ಇದರಿಂದ ನಿಮ್ಮ ಶ್ರೇಯಸ್ಸಿಗೆ ಕುಂದಕವಲ್ಲವೆ? ಹಾಗೆ ಅಧೋಗತಿಗೆ ಬೀಳುವ ಮೊದಲೆ ವಿವೇಕ ತಂದುಕೊಂಡು, ಸರಿಯಾದ ಮಾರ್ಗ ಹಿಡಿಯುವುದೇ ಲೇಸಲ್ಲವೆ?

ವಿದ್ಯಾರ್ಥಿ ದೆಸೆ ಮಾನವ ಜೀವನದ ಪ್ರಥಮ ಸೋಪಾನ. ಇದನ್ನೇರಿ ಮುಂದೆ ಮುಂದೆ ಸಾಗದಿದ್ದರೆ ಕತ್ತರಿಯಲ್ಲಿ ಸಿಕ್ಕಿದ ಅಡಿಕೆಯ ರೀತಿ ಒದ್ದಾಡಬೇಕಾಗುವುದು. ಆಗ ಮುಂದಿನ ನಿಮ್ಮ ಸುಖದ ಕನಸು ಕಾಣುವ ನಿಮ್ಮ ಸಂಪತ್ತು, ಸುಖ, ಸಂತೋಷ, ಶ್ರೇಯಸ್ಸು ಇವೆಲ್ಲಕ್ಕೂ ಸಂಚಕಾರ ಬರುವುದು ಖಂಡಿತ! ಆದ್ದರಿಂದ ನಿಮ್ಮ ಬದುಕಿಗೆ ಕೊಡಲಿ ಪೆಟ್ಟು ಬೀಳದಂತೆ ಎಚ್ಚರ ವಹಿಸಿರಿ. ನಿಮ್ಮ ಬಾಳಿನ ಗುರಿ, ತೊಡಕಿಲ್ಲದೆ ಸಮಂಜಸವೂ, ನ್ಯಾಯವೂ ಆಗಿರಲು ನೋಡಿಕೊಳ್ಳಿರಿ. ನಿಮಗೆ ಮಾತ್ರವಲ್ಲದೆ ನಿಮ್ಮ ವಂಶದ ಪೀಳಿಗೆಗೆ ಸಹ ಸಾಧನವಾಗುವ ಕ್ರಮವನ್ನು ಅನುಸರಿಸುವುದು ಶ್ರೇಯಸ್ಕರ.

ವಿದ್ಯಾರ್ಥಿಗಳಾಗಿರುವ ನೀವು ಮುಂದಿನ ಪ್ರಜೆಗಳಾದ ಕಾರಣ ನಿಮ್ಮ ಶಿಕ್ಷಣ ಮುಂದುವರಿದಂತೆ ಮನೋವಿಕಾಸವೂ ಕುದುರಬೇಕು. ಸ್ವಾಭಿಮಾನ ಹಿಡಿದೆತ್ತಿ ಸ್ವಜನ ಹಾಗೂ ಪರಜನರ ಹಿತಾಸಕ್ತಿಯನ್ನು ಗಮನಿಸಲು ತವಕವಿರಲಿ. ಇದರಿಂದ ಜನರ ವಿಶ್ವಾಸ, ಪ್ರೇಮ, ಸ್ನೇಹವೃದ್ಧಿ, ಅಭಿಮಾನಗಳು ಹೆಚ್ಚುವುವು. ಎಲ್ಲರ ಏಳಿಗೆಗಾಗಿ ಶ್ರಮಿಸಿ ಕಷ್ಟಸುಖಗಳತ್ತ ಸಮನಾಗಿ ಬೆರೆತು ಜೀವನ ಸಾರ್ಥಕ್ಯ ಹೊಂದುವುದು ನಾಗರೀಕನ ಲಕ್ಷಣ.

ವಿದ್ಯಾರ್ಥಿ ದೆಸೆ ಅಪರಂಜಿ ಚಿನ್ನದಂತೆ ಎಂಬುದಾಗಿ ಮಹನೀಯರು ಅಭಿಪ್ರಾಯಪಡುತ್ತಾರೆ. ಈ ಮಾತನ್ನು ನೀವು ಶಾಶ್ವತಗೊಳಿಸಲು ಯತ್ನಿಸಿರಿ. ಉತ್ತಮ ಮೌಲ್ಯವುಳ್ಳ ಜೀವನದ ಆದರ್ಶಗಳನ್ನು ಅನುಸರಿಸಿ ನಡೆದರೆ ನಿಮ್ಮ ಬಾಳು ಹಸನಾಗುತ್ತದೆ. ವಿದ್ಯಾವಿನಯ ಸಂಪನ್ನರೆಂಬುವ ಕೀರ್ತಿ ನಿಮ್ಮ ಪಾಲಿಗೆ ಬಂದಿರುವಾಗ ಅದನ್ನೇಕೆ ಕಳೆದುಕೊಳ್ಳಬೇಕು? ದೈವ ಭಕ್ತಿ, ಸದ್ಧರ್ಮಾಚರಣೆ ಪಾಲಿಸಿದರೆ ಕಲಿತ ವಿದ್ಯೆ ಸಾರ್ಥವಾದೀತು!

# ಶ್ರೀಮದುದಾನೇಶ್ವರ ಶತಕಮ್

ಹೊಗಲು ಜಾರಾಲಯವ ಕಾಮವು
ಹೊಗಲು ದೇವಾಲಯವ ಪ್ರೇಮವು
ಬಗೆಗೆ ತೋರುವದಾಗಿ ದುಷ್ಟಕೃತಘ್ನಸಂಘದೊಳೂ ।
ಹೊಗದೆ ಸದ್ಗುಣ ಶುಚಿಕೃತಜ್ಞತೆ
ಬಗೆದು ಸನ್ಮಾರ್ಗದೊಳು ನಡೆಯಲು
ನಗುತ ಪಾಲಿಪಜೀಯ ಉದ್ದಾನೇಶದಯವಾಗೋ ॥

ದುಷ್ಟ ಕಾರ್ಯವ ಮಾಳ್ಪಶಕ್ತಿಯೆ
ಶಿಷ್ಟ ಕಾರ್ಯವ ನೆಸಗಬಲ್ಲುದು
ದುಷ್ಟಕಾರ್ಯದೆ ಪಶುಕೆ ಸುಕೃತದೆ ದೇವತಾಜನ್ಮಾ ।
ಸ್ಪಷ್ಟತರ ಸುಖದುಃಖಗಳೆ ಫಲ
ವಿಷ್ಟಕೂಳ ಹವಾಸ ಕಾರಣ
ಶಿಷ್ಟರೊಳಗಿರುಸುತ್ತೆ ಉದ್ದಾನೇಶ ದಯವಾಗೋ ॥

ತನುವು ಶಾಶ್ವತವಲ್ಲವಾರಿಗು
ಧನಕನಕ ಸಿರಿ ಪಶುವು ಮನೆಯೊಳು
ಮನದ ಸಿರಿಸುತ ಒಳಗ ಮಸಣದೆ ನೆಲನದಲ್ಲಲ್ಲೇ ।
ಘನದಿನಂಬಿದ ತನುವುಗುಳಿಯೊಳು
ಮನದ ಪುಣ್ಯವು ಪಾಪಜತೆಯೊಳು
ಚಿನುಮಯಾತ್ಮಕಜೀಯ ಉದ್ದಾನೇಶದಯವಾಗೋ ॥

ಪಾಪದಾಬಿರುಗಾಳಿಯಿಂ ಭವ
ತಾಪದಾ ನರಕಾಬ್ಧಿ ಸೇರಿದೆ
ತಾಪನುಳಿದಾರಿದ್ರ್ಯಮಡು ಜನಿಮರಣದಲೆಯೊಳಿಹೇ
ಕೋಪಷುತ್ತೈಷೆಮೊಸಳೆ ಬಾಧೆವಿ
ಕಲ್ಪದಿಂಗತಿಗಾಣದಿದೆಂ
ದಾಪದುದ್ಧರ ಜೀಯ ಉದ್ದಾನೇಶದಯವಾಗೋ ॥

ರಾಮಭೀಮರು ನಮ್ಮಜನತೆಯವ
ರೀಮಹಾಭೂತಂಗಳೀರವಿ
ಸೋಮಗ್ರಹಗಣವೆಲ್ಲವಂದಿನ ವಲ್ಲದಿನ್ನಿಲ್ಲಾ
ಧರ್ಮದಿಂದವರಂದೆ ಮುಕ್ತರು
ಕರ್ಮದೊಳು ನಾವಿನ್ನು ಬದ್ಧರು
ವಾಮದೇವನೆ ಜೀಯ ಉದ್ಧಾನೇಶದಯವಾಗೋ ॥

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ
**8597, 2373, 2577**







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.।
ದೂರವಾಣಿ : **8077**



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ : **2677**




**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.।
ದೂರವಾಣಿ : **2077**

# ಮನುಷ್ಯತ್ವದಿಂದ ದೇವತ್ವದೆಡೆಗೆ

ಶ್ರೀಶೈಲ ಜತ್ತಿ, ವಿಜಯಾ ಬ್ಯಾಂಕ್ ಮುಖ್ಯ ಶಾಖೆ, ಧಾರವಾಡ - 580 001

ಮನುಷ್ಯನು ಬುದ್ಧಿಯಿರುವ ಪ್ರಾಣಿಯು. ಮನುಷ್ಯನು ಮೂಲತಃ ಪ್ರಾಣಿಯಾದರೂ ಆತನಲ್ಲಿರುವ ಬುದ್ಧಿಯ ಬಲದಿಂದ ಆತನು ಪ್ರಾಣಿಗಳಿಗಿಂತ ಭಿನ್ನನಾಗಿದ್ದಾನೆ, ಚಿಂಪಾಂಜಿಯು ಹೊರತಾಗಿ ಮನುಷ್ಯನೇ ಎರಡು ಕಾಲುಗಳುಳ್ಳ ಪ್ರಾಣಿಯಾಗಿದ್ದಾನೆ.

ಮನುಷ್ಯ ಮೂಲದಲ್ಲಿ ಏನಿದ್ದನೆನ್ನುವುದಕ್ಕಿಂತ ಈಗ ಹೇಗಿದ್ದಾನೆ ಎಂಬುದು ಬಹಳ ಮುಖ್ಯವಾಗಿದೆ. ದೈಹಿಕವಾಗಿ ಆತನಲ್ಲಿ ಬಹಳ ಬದಲಾವಣೆಯಾದದ್ದು ಸತ್ಯ. ಅದರಂತೆಯೆ ಆತ ಬೌದ್ಧಿಕವಾಗಿ ಅಗಾಧವಾದ ಬದಲಾವಣೆ ಹೊಂದಿದ್ದಾನೆ.

ಜಗತ್ತಿನಲ್ಲಿ ಮೊದಲು ಮಾನವನು ಹುಟ್ಟಿರಲಿಲ್ಲ. ಕೋಟಿಗಟ್ಟಲೆ ವರುಷಗಳು ಉತ್ಕ್ರಾಂತಿಯನಂತರ ಮನುಷ್ಯ ಜನ್ಮ ತಳೆದನು. ಈ ಜಗತ್ತಿನಲ್ಲಿ ಆದಿಯಲ್ಲಿ ಏನೂ ಇರಲಿಲ್ಲ, ಏನೂ ಇರಲಿಲ್ಲವೆಂದರೆ ಎನಾದರೂ ಇರಲೇ ಬೇಕಲ್ಲವೆ? ಅದುವೇ ಶೂನ್ಯ. ಆ ಶೂನ್ಯವೇ ಇರುವಿಕೆ ಆ ಇಲ್ಲವೇ ಪರಮಾತ್ಮ ಆ ಇಲ್ಲದಲ್ಲಿಯೂ ಎಲ್ಲವೂ ಅಡಗಿದೆ. ಆದುದರಿಂದಲೇ ಶೂನ್ಯಕ್ಕೆ ಅಲ್ಲಮ ಅಲ್ಲಾ ಎಂಬ ಪದಗಳು ಬಂದವುಗಳಾಗಿವೆ ಈ ಇಲ್ಲ ಅಲ್ಲಗಳು ಇದ್ದು ತೋರುವ ನಮ್ಮ ತಲೆಗೆ ಹೋಗಬೇಕಾದರೆ, ತಲೆಯನ್ನು ಒರೆಗೆ ಹಚ್ಚಿ ನೋಡೋಣ. ತಲೆ ಎಂದರೆ ಪ್ರತಿಯೊಂದು ಪ್ರಾಣಿಗೆ ಮೊದಲಿಗಿರುವ ಅಂಗವಾದರೂ ಅದರೊಳಗಣ ಹೊರಣ ಮಾತ್ರ ವಿಭಿನ್ನ ಪ್ರಾಣಿಗಳಲ್ಲಿ ಬೇರೆ ಬೇರೆಯಾಗಿದೆ.

ಮನುಷ್ಯ ಹಾಗೂ ಮಾನವ ಎಂಬ ಶಬ್ದಗಳು ಸೂಕ್ಷ್ಮವಾಗಿ ಭಿನ್ನವಾಗಿವೆ ಆದರೂ ಅದನ್ನು ಎಷ್ಟೋಸಲ ಒಂದೇ ಅರ್ಥದಲ್ಲಿ ಉಪಯೋಗಿಸುತ್ತೇವೆ. ಉಷ್ಣ ರಕ್ತವುಳ್ಳ ಪ್ರಾಣಿಗಳ ಪೈಕಿ ಮನಷ್ಯ ಎಂಬ ಪ್ರಾಣಿಯನ್ನು ವಿಂಗಡಿಸಿ ಹೇಳುವ ಶಬ್ದ ಮನುಷ್ಯ ಎಂಬುದು. ಮನುಷ್ಯ ಪ್ರಾಣಿಗಳಿಗೆ ಹತ್ತಿರದವನಾಗಿದ್ದಾನೆ. ಆದರೆ ಮಾನವನು ಮನುಷ್ಯನಿಂದ ಬಹುದೂರ ಸಾಗಿದವನು. ಮಾನವನು ತನ್ನ ಪ್ರಾರಂಭದಲ್ಲಿ ಮನುಷ್ಯನಾಗಿದ್ದನು. ಮನುಷ್ಯ ಹೋಗಿ ಮಾನವನಾಗಲು ಆತನಿಗೆ ಯುಗಯುಗಾಂತರಗಳೇ ಬೇಕಾದವು. ಇಷ್ಟಾದರೂ ಎಲ್ಲಾ ಮನಷ್ಯ ಪ್ರಾಣಿಗಳೂ ಮಾನವರಾಗಲು ಇನ್ನೂ ಮನುಷ್ಯ ಶಬ್ದದೊಂದಿಗೆ ಪ್ರಾಣಿ ಎಂಬ ಶಬ್ದವನ್ನು ಇಟ್ಟುಕೊಂಡೇ ಇದ್ದಾರೆ.

" ಸರ್ವರಧಿಕಾರಿಗಳಪ್ಪರುಮುಗನೇ ಮುಕ್ತಿಯ ಹೊಂದಲಿಕೆ ಕುರುಡನಿರಲಿ, ಕುಂಟನಿರಲಿ, ದಾಸವೇಶಿಯಿರಲಿ ಸರ್ವಧಿಕಾರಿಗಳಪ್ಪರು " ಎಂದು ನಿಜಗುಣರ ಮಾತಿನಲ್ಲಿ ವ್ಯಕ್ತಿ ಹೇಗೇ ಇದ್ದರೂ ಸೈ ಆತ ಮಾನವನಾಗಿದ್ದರೆ ಸಾಕು ಎಂಬ ಅರ್ಥವಿದೆ ಮನುಷ್ಯನಿಂದ ಮಾನವ ಮಾನವನಿಂದ ದೇವ ಈ ರೀತಿಯ ಏರು ವಿಕೆ ಇರುವಂತೆಯೇ ಮನುಷ್ಯನಿಂದ ದಾನವ ಎಂಬ ಸೀದಾ ಇಳಿಕೆಯ ಕ್ರಮ ಒಂದಿದೆ. ಏರಿಕೆಯ ಕ್ರಮ ಯಾವಾಗಲು ಪರಿಶ್ರಮವುಳ್ಳದ್ದಾಗಿದೆ. ಇಳಿಕೆಯ ಕ್ರಮಕ್ಕೆ ಪರಿಶ್ರಮ ಬೇಕಾಗಿಲ್ಲ.

ಮೂಲತಃ ಮನುಷ್ಯ ಪ್ರಾಣಿಯಲ್ಲಿದ್ದ ಕಾಮ, ಕ್ರೋಧ, ಲೋಭ, ಮದ ಮೋಹ, ಮತ್ಸರಗಳನ್ನು ಇದ್ದಂತೆಯೇ ಉಳಿಸಿಕೊಂಡು ಬೆಳಸಿಕೊಂಡು ಹೋದ ರಾಯಿತು. ನಮಗೆ ಗೊತ್ತಿಲ್ಲದಂತೆಯೇ ದಾನವತೆಯ ಪಟ್ಟ ಬಂದೇ ಇರು ತ್ತದೆ. ಅದಕ್ಕಾಗಿ ಪ್ರಯತ್ನ ಬೇಕಾಗಿಲ್ಲ

ಆದರೆ ಮನಷ್ಯನು ಪಡೆದ ಯುಗಯುಗಾಂತರಗಳ ಪಯಣದ ಸಂಸ್ಕಾರದ ಬಲದಿಂಧ ಮಾನವತ್ವವನ್ನು ಪಡೆದಿದ್ದಾನೆ. ಮಾನವತೆ ಎಲ್ಲರಲ್ಲಿ ಬಂದಿದೆ ಎಂದು ಹೇಳಲಿಕ್ಕಾಗದು. ಇಳಿಕೆಯ ಕ್ರಮದ ಅಪವಾದ ವಿರುವುದರಿಂದಾಗಿ ಅಂತಹ ಮಾನವತೆ ಇದ್ದಾಗಮಾತ್ರ ದೇವತ್ವವನ್ನು ಪಡೆಯುವ ಪ್ರಶ್ನೆ ಉದ್ಭವಿಸುವದು. ಕುಸ್ತಿಕಣಕ್ಕೆ ಇಳಿಯ ಬೇಕಾದರೇನೆ ಕನಿಷ್ಟ ಪೈಲವಾನ ನಾಗಿರಬೇಕು. ಕಣದಲ್ಲಿಳಿದಮಾತ್ರಕ್ಕೆ ಗೆಲ್ಲುವ ಗ್ಯಾರಂಟಿ ಇಲ್ಲ. ಅದರಂತೆಯೆ ಪ್ರತಿಯೊಬ್ಬ ಮಾನವನೂ ದೇವತ್ವ ಹೊಂದಿಯೇ ತೀರುವನೆಂಬ ಗ್ಯಾರಂಟಿಯೂ ಇಲ್ಲ. ಆದರೆ ದೇವತ್ವ ಹೊಂದಲು ಮೊದಲು ಮಾನವನಾಗಬೇಕು.. ದೇವತ್ವ ಪಡೆ ಯುವ ಗ್ಯಾರಂಟಿ ಇಲ್ಲವೆಂದಮೇಲೆ ಮನುಷ್ಯ ಹೋಗಿ ಮಾನವನಾಗುವ ಅವಶ್ಯ ಕತೆಯೇನು? ಎಂದು ಕೇಳಬಹುದು ಏಕೆಂದರೆ ಒಮ್ಮೆ ಅರ್ಹತೆ ಪಡೆದುಕೊಂಡು ಕುಳಿತರೆ ದೇವನಾಗಲು ಬಂದೇ ಬರುತ್ತದೆ. ಅರ್ಹತೆಯೇ ಬಾರದಿದ್ದರೆ ಕೇವಲ ಪ್ರೇಕ್ಷಕರ ಗ್ಯಾಲರಿಯಲ್ಲಿ ಜಾಗ ದೊರೆಯುಬಹುದು. ಅದೂ ಹಣಕೊಟ್ಟು ಕೊಂಡರೆ ಕೊನೆಯ ಪಕ್ಷ ಪ್ರೇಕ್ಷಕನಾದರೂ ಅಡ್ಡಿಯಿಲ್ಲ. ಮುಂದೆ ಎಂದಾದ ರೊಮ್ಮೆ ಹುದ್ದರಿ ಯಾಗಬಹುದು.

ದೇವತ್ವ ಪಡೆಯುವ ಮೈದಾನ ಬಹಳ ವಿಶಾಲವಾಗಿದೆ. ಅಲ್ಲಿ ಎಷ್ಟು ತಾಲೀಮೂ ಮಾಡಿದರೂ ಕಡಿಮೆಯೇ. ತಾಲೀಮೂ ಮಾಡಲು ಕನಿಷ್ಠ ದೇಹದಾರಢ್ಯ ಬೇಕಾಗುತ್ತದೆ. ತಿಂದ ಆಹಾರ ಸರಿಯಾಗಿ ಪಚನವಾಗು ವಂತೆಯೇ ಮಾನಸಿಕ ಕ್ರಿಯೆಯೂ ಇದೆ.

ಸ್ಥೂಲ ದೇಹ ಕಣ್ಣಿಗೆ ಕಾಣುವುದಾದರೆ-ಸೂಕ್ಷ್ಮ ಹಾಗೂ ಕಾರಣ ಶರೀರಗಳು ಕಣ್ಣಿಗೆ ಕಾಣದಿದ್ದರೂ ಸೂಕ್ಷ್ಮ ರೀತಿಯಿಂದ ಇವೆ. ಅವು ಮನಸ್ಸಿನೊಂದಿಗೆ

ಜೋಡಿಸಲ್ಪಟ್ಟಿವೆ. ಮನಸ್ಸು ಆರೋಗ್ಯವಾಗಿರಬೇಕು. ಮನಸ್ಸಿನ ಆರೋಗ್ಯಕ್ಕೆಟ್ಟರೆ ಮನೋರೋಗ ಬರುವುದು ರೋಗ ಹೆಚ್ಚಾದರೆ ಹುಚ್ಚು ಹಿಡಿಯುವುದು ಆರೋಗ್ಯವಂತ ದೇಹದಲ್ಲಿ ಆರೋಗ್ಯವಂತ ಮನಸ್ಸಿದೆ. ಆರೋಗ್ಯವಂತ ಮನಸ್ಸಿದ್ದರೆ ದೇಹವು ಆರೋಗ್ಯವಾಗಿರುತ್ತದೆ. ಅಂದರೆ ಮನಸ್ಸು ಹಾಗು ದೇಹಗಳೆರಡೂ ಏಕ ಕಾಲಕ್ಕೆ ಆರೋಗ್ಯದಿಂದಿರಬೇಕು. ಇರುತ್ತವೆ. ಎರಡಲ್ಲಿ ಒಂದು ಅನಾರೋಗ್ಯ ವಾದರೆ ಇನ್ನೊಂದು ತಾನೇ ಅನಾರೋಗ್ಯ ಹೊಂದಿರುವುದು, ಅವರಿಗೂ ಆರಾಮ ಇದ್ದಾಗ ಮಾನವನು ಅದರ ನೆನಪು ಮಾಡಬಹುದು. ಹಾಗಾದರೆ ಅವೆರಡೂ ಆರಾಮವಾಗಿರಬೇಕಾದರೆ ಏನು ಮಾಡಬೇಕು. ಅವು ತಮಷ್ಟಕ್ಕೆ ಆರಾಮವಾಗ ಲಾರವು, ಏಕೆಂದರೆ ಅವು ಇರತಕ್ಕ ಪರಿಸರವು ಮಲಿನವಿರುತ್ತಿದೆ. ಅದು ಅಲ್ಲದೆ ಮನಸ್ಸು ಜನ್ಮ ಜನ್ಮಾಂತರದ ಸಂಸ್ಕಾರಗಳನ್ನು ಹೊತ್ತು ತಂದಿರುತ್ತದೆ. ಪುಣ್ಯ-ಪಾಪ ಗಳ ಜಮಾ-ಖರ್ಚು ಹೊಂದಿವೆ. ಶರೀರವು ಹಾಲಿ ಜನ್ಮದ ಜಾಡ್ಯವನ್ನು ಮಾತ್ರ ಹೊಂದಿರುತ್ತದೆ. ಅದೂ ಅಲ್ಲದೆ ಶರೀರದ ಜಿಡ್ಡಿಗೆ ಮನವೇ ಆಕರವಾಗಿದೆ. ಹೀಗಾಗಿ ದೇಹವನ್ನು ಶುಚಿರ್ಭೂತಗೊಳಿಸಿದರಾಯಿತು. ಆದರೆ ಮನಸ್ಸಿನ ಕೊಳೆ ತೊಳೆಯು ವದು ಬಹಳ ಕಠಿಣವಿದೆ. ತೊಳೆಯುವುದು ಎಂದರೆ ಮನಸ್ಸಿಗಂಟಿದ್ದ ಕಳೆ ಕೀಳ ಬೇಕು. ಕೀಳುವುದೆಂದರೆ ಕೀಳುವುದಿಲ್ಲ. ಖಾಲಿ ಸೀಸೆಯಲ್ಲಿ ಕೂಡಾ ವಾಯುವಿರ ವಂತೆ ಖಾಲಿಮನಸ್ಸು ಇರಲಾರದು. ಅದರಲ್ಲಿ ಏನಾದರೂ ತುಂಬಿದಾಗ ಮಾತ್ರವೊದಲಲ್ಲಿ ಜಿಡ್ಡು ಬಿಡುವುದು ಆದರೆ ಮನಸ್ಸು ಎಂಬುದನ್ನು ತುಂಬುವೆವೊ ಆದಕ್ಕೆ ಹಿಡಿದುಕೊಳ್ಳುವುದು ಸುಗುಣಗಳನ್ನು ತುಂಬಿದರೆ ಅದೇ ಸುಗುಣಗಳನ್ನು ತುಂಬಿದರೆ ಅದನ್ನೇ ಹಿಡಿದುಕೊಳ್ಳುವುದು ಮನಸ್ಸಿನಮೇಲೆಮತ್ತೆ ಅಧಿಕಾರಿಗಳಿದ್ದಾರೆ ಮನಸ್ಸು ಅಂಗಾಂಗಳೆಂಬ ಸೇನಾ ಪಡೆಯ ಮುಖ್ಯಸ್ಥನಿದ್ದಂತೆ ಸೇನಾಪಡೆಯ ಮುಖ್ಯಸ್ಥನ ಮೇಲೆ ರಕ್ಷಣಾಮಂತ್ರಿ ಮುಖ್ಯ ಮಂತ್ರಿಗಳಿರುವಂತೆ ಬುದ್ಧಿ ಹಾಗು ವಿವೇಕರಿಬ್ಬರಿದ್ದಾರೆ. ಅವರ ಅಧೀನದಲ್ಲಿ ಚಿತ್ತು ಎಂಬ ಟೇಪ್‌ರಿಕಾಡ್ ಇದೆ. ಅವರು ಆ ಚಿತ್ತಿನಲ್ಲಿ ಮಾಡಿದ ಪೂರ್ವ ನಿದರ್ಶನಗಳನ್ನು ನೋಡಿಕೊಂಡು ಮನಸ್ಸಿಗೆ ಆಜ್ಞೆ ಕೊಡುತ್ತಿರುತ್ತಾರೆ. ಅವೆರಡೂ ಅಂಗಗಳು ಆತ್ಮನೆಂಬ ರಾಜನ ಆಧೀನರಾಗಿದ್ದಾರೆ.

ಅಧೀನತೆಯ ಅರ್ಥ ಬಹಳ ನಾಜೂಕಾಗಿದೆ. ಆತ್ಮನು ರಾಜನಾದರೆ ಬದ್ಧಿ ಹಾಗೂ ವಿವೇಕರು ಅಪ್ತ ಮಂತ್ರಿಗಳು ಮನಸ್ಸು ದಂಡಾಧಿಕಾರಿ, ಅವಯುವಗಳು ಸೇನಾಬಲ ಇವೆಲ್ಲವೂ ಒಬ್ಬರಿಗೊಬ್ಬರು ವಿದೇಯರಾಗಿದ್ದು ರಾಜನ ಆಜ್ಞಾನುವರ್ತಿ ಗಳಾಗಿ ಕೆಲಸ ಮಾಡಬೇಕು. ಆದರೆ ಬಲವನ್ನು ಹೊಂದಿದ ಮನಸ್ಸು ಒಬ್ಬರಿ ಗೊಬ್ಬರಿಗೆ ವಿಧೇಯತೆಯನ್ನು ಬಿಟ್ಟು ಒಳಸಂಚು ನಡೆಸಿ ರಾಜನನ್ನೇ ಬಂಧನ ದಲ್ಲಿ ನೂಕಬಹುದಾಗಿದೆ. ಹೀಗಾದಾಗ ಆಜ್ಞೆ ನೀಡಬೇಕಾದ ಅರಸನು ದುಷ್ಟರ ಕೈಗೊಂಬೆಯಾಗಿ ಬಂಧನದಲ್ಲಿದ್ದುಕೊಂಡು ಮನಸ್ಸು ಹೊರಡಿಸುವ ಖೋಟಾ

ಆಜ್ಞೆಗಳಿಗೆ ಸಹಿಮಾಡುವ ಪ್ರಸಂಗ ಬರುತ್ತದೆ. ಇದೇ ರೀತಿ ಮುಂದುವರಿದರೆ ಮನಸ್ಸಿನ ದುರಾಡಳಿತದಿಂದ ನಾಶವಾಗಬೇಕಾಗುತ್ತದೆ.

ಆದುದರಿಂದ ಇಲ್ಲಿ ರಾಜನಾದ ಆತ್ಮನು ತನ್ನ ಅಧಿಕಾರದ ವ್ಯಾಪ್ತಿಯನ್ನು ಅರಿತುಕೊಂಡು ಬುದ್ಧಿ ಹಾಗೂ ವಿವೇಕರಿಗೆ ಪರಮಾಧಿಕಾರ ನೀಡಿ ಮನಸ್ಸನ್ನು ಯಾವಾಗಲು ಹದ್ದುಬಸ್ತಿನಲ್ಲಿಡಬೇಕು. ಇಲ್ಲವಾದರೆ ಮನಸ್ಸು ಆತ್ಮನಿಗೆ ದ್ರೋಹ ವೆಸಗಿ ಆತ್ಮನನ್ನು ದುಸ್ಥಿತಿ ಮಾಡುವುದಲ್ಲದೆ ತಾನೂ ನಾಶಹೊಂದುವುದು.

ಇಲ್ಲಿ ಬುದ್ಧಿ ಹಾಗೂ ವಿವೇಕವನ್ನು ಮಂತ್ರಿಗಳಿಗೆ ಮನಸ್ಸನ್ನು ದಂಡನಾಯಕನಿಗೆ ಆತ್ಮನನ್ನು ಅರಸನಿಗೆ ಹೋಲಿಸುವುದರಲ್ಲಿ ವಿಶೇಷತೆಯಿದೆ. ಬುದ್ಧಿ ಹಾಗು ವಿವೇಕಗಳು ಆತ್ಮನ ಹಾಗು ಇಂದ್ರಿಯಗಳ ನಡುವಿನ ಜೋಡಣೆಯ ಸಂಪಳಿಯಿದ್ದಂತೆ ಆತ್ಮ ಹಾಗೂ ಇಂದ್ರಿಯಗಳಿಗೆ ನೇರ ಸಂಬಂಧವಿಲ್ಲ ಅದಕ್ಕೆ ನಡುವೆ ಮನಸ್ಸಿಗೆ ರಾಜನ ಸತ್ತೆಯನ್ನು ದಂಡನಾಯಕನ ಸೇನಾಬಲದ ಬಲದಿಂದ ಜಾರಿಗೊಳಿಸಬೇಕಾಗುತ್ತದೆ. ಬುದ್ಧಿ ಹಾಗೂ ವಿವೇಕಗಳಿಗೆ ಸೇನೆಯ ಅಧಿಕಾರವಿಲ್ಲ. ಅವು ಏನಿದ್ದರೂ ದಂಡಾಧಿಪತಿಯ ಅಧಿಕಾರ ಬಲದಿಂದ ರಾಜನ ಸತ್ತೆಯನ್ನು ಜಾರಿಗೊಳಿಸಬೇಕು ಹೀಗಾಗಿ ಇಂದ್ರಿಯಗಳೆಂಬ ಸೇನಾಬಲಕ್ಕೆ ಮನಸ್ಸು ಪ್ರಭುವಾಗಿರುತ್ತದೆ. ಆದುದರಿಂದಲೇ ನಾವು ನಿತ್ಯ ಕಾರ್ಯದಲ್ಲಿ ಬುದ್ಧಿ ಹಾಗೂ ವಿವೇಕರ ಸೂಚನೆಗಳನ್ನು ಮೀರಿ ಮನಸ್ಸಿನ ಅಧಿಕಾರ ಚಲಾಯಿಸಿ ಎಷ್ಟೋ ಸಲ ಯುದ್ಧ ಮಾಡಿ ಎಷ್ಟೋ ಇಂದ್ರಿಯಗಳನ್ನು ಕಳೆದುಕೊಳ್ಳುತ್ತೇವೆ.

ಮೂಲತಃ ರಾಜಸತ್ತೆಯಿಂದಲೇ ಎಲ್ಲರಿಗೂ ಸತ್ತಾ ದೊರಕಿರುವುದು. ಸತ್ತೆಯು ಒಮ್ಮೆ ದೊರಕಿದ ಮೇಲೆ ಕೂಡಲೆ ಸತ್ತೆಯನ್ನು ಕಿತ್ತುಕೊಳ್ಳಲು ಬರುವದಿಲ್ಲ. ಹೋರಾಡಿ ಮನಸ್ಸು ತನಗೆ ಸಿಕ್ಕ ಅಧಿಕಾರದ ದುರುಪಯೋಗ ಮಾಡಿಕೊಳ್ಳಲು ಸಂಭವವೇ ಜಾಸ್ತಿ ಇಂದ್ರಿಯಾಳೆಂಬ ಸೇನೆಗೆ ಆತ್ಮನೇ ರಾಜ. ಮನಸ್ಸು ಸೇನಾಪತಿಯಾಗಿರುವದರಿಂದ ಇಂದ್ರಿಯಗಳಿಗೆ ಆತ್ಮನ ಭೆಟ್ಟಿಯಿರುವದಿಲ್ಲ. ಅವು ಏನಿದ್ದರೂ ತಮ್ಮ ಅಧಿಕರತ ಅಧಿಕಾರಿಯಾದ ಮನಸ್ಸಿಗೆ ಹೊರ ಹೋಗಬೇಕು. ಸೇನೆಯು ಸೇನಾಧಿಪತಿಯ ಹಿಡಿತದಲ್ಲಿರುವದರಿಂದಾಗಿ ಆತ್ಮನೆಂಬರಸನು ಮನಸ್ಸೆಂಬ ಸೇನಾಧಿಪತಿಯ ಮೇಲೆ ಪ್ರಭಾವಿ ಹಿಡಿತವನ್ನಿಟ್ಟುಕೊಳ್ಳುವದು ಅತ್ಯಾವಶ್ಯಕವಿದೆ. ಅಂಥ ಹಿಡಿತವನ್ನಿಟ್ಟುಕೊಳ್ಳಲು ಬುದ್ಧಿ ಹಾಗೂ ವಿವೇಕರೆಂಬ ಮಂತ್ರಿಗಳಿಗೆ ವ್ಯಾಪಕ ಅಧಿಕಾರ ನೀಡಿ ಮನಸ್ಸನ್ನು ನಿಯಂತ್ರಿಸಬೇಕು, ಇಷ್ಟಕ್ಕೆ ಆತ್ಮನ ಕೆಲಸ ಮುಗಿಯಲ್ಲಿಲ್ಲ

ಯಾವ ರೀತಿ ರಾಜನಾದವನು ಮಹಾರಾಜನಿಗೆ ತಕ್ಕ ರಾಜ್ಯ ಯೋಗಕ್ಷೇಮವನ್ನು ತಿಳಿಸುತ್ತ ಮಹಾರಾಜನಿಗೆ ವಿಧೇಯನಾಗಿರುವನೋ ಅದೇ ತರವಾಗಿ ಆತ್ಮನೆಂಬ

ರಾಜನು ಪರಮಾತ್ಮನೆಂಬ ಮಹಾರಾಜನಿಗೆ ವಿಧೇಯನಾಗಿದ್ದುಕೊಂಡು ಆತನ ಸಾರ್ವಭೌಮ ಅಧಿಕಾರವನ್ನು ಮಾನ್ಯ ಮಾಡುತ್ತ ಇರಬೇಕು. ಅದನ್ನು ಬಿಟ್ಟು ಹೇಗೊ ರಾಜಾಧಿಕಾರವಿದೆಯೆಂದು ಪರಮಾತ್ಮನನ್ನೇ ವಿರೋಧಿಸಿ ಬದುಕಲೆಣಿಸ ಬಾರದು ಅದು .ಸಾಧ್ಯವೂ ಇಲ್ಲ.

ಹೀಗೆ ಮನಸ್ಸು ತನ್ನ ಕೆಲಸವನ್ನು ಸರಿಯಾಗಿ, ಯಥಾವತ್ತಾಗಿ ನಿರ್ವಹಿಸಿ ತೊಡಗಿತೆಂದರೆ ಸಾಕು ಮನುಷ್ಯ ಮಾನವನಾಗಿರುತ್ತಾನೆ. ಮನಸ್ಸನ್ನು ಸತ್ಕಾರ್ಯ ಗಳಲ್ಲಿ ತೊಡಗಿಸಬೇಕು. ಸುವಾಸನೆ ಬರಬೇಕಾದರೆ ಸುಗಂಧವನ್ನ ಉಪಯೋಗಿಸು ವಂತೆ ಮನಸ್ಸಿಗೆ ನಿರ್ಮಲವಾದ ವಿಚಾರಗಳನ್ನು ಹಚ್ಚಬೇಕು, ಆದುದರಿಂದಲೇ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ಕೈವಲ್ಯ ಕಲ್ಪವಲ್ಲರಿಯ ಮೊದಲ ಪದ್ಯದಲ್ಲಿಯೇ ಶ್ರೀಗುರುವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕ್ತಿ ಎಂದು ಹೇಳಿದ್ದಾರೆ. ಅಂತಹ ಗುರುಗಳು ಯಾವದನ್ನು ಮಾಡಬಾರದು ಯಾದದನ್ನು ಮಾಡ ಬೇಕು ಎಂಬುದನ್ನು ತಿಳಿಸಿ ಹೇಳುವರು.

ಮಾ || ಶ್ರೀ ಗುರವಚನೋಪದೇಶವನಾಲಿಸಿ ।
ದಾಗಳಹುದು ನರರಿಗೆ ಮುಕ್ತಿ || ಪಲ್ಲವಿ ||
ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು ।
ಹರನಡಿವಿಡಿ ಶಾಂತರೊಡನಾಡು ।
ಕರುಣವಿರಲಿ ಜೀವರೊಳು ನೀತಿವಿದನಾಗು ।
ಪೊರೆ ಪೊರ್ದಿದರನೆಂದುಬೆಸಸುವ || ೧ ||
ನಿಂದಿಸಿನುಡಿಯದಿರಾರನು ಮನಸಿಗೆ ।
ಬಂದಂತೆ ನಡೆಯದಿರಿಹದಲ್ಲಿ ।
ಕುಂದುವಡೆಯದಿರು ಕಾಮಾದಿಗಳನುಜಯಿ ।
ಸೆಂದು ಕೈವಿಡಿದನುಗ್ರಹಿಸುವ || ೨ ||
ಭವಮಾಲೆಗಲಸು ಪುಸಿಯದಿರೆಡರು ಬಂದು ।
ಕವಿಯಲಂಜದಿರು ಸಂಪದ ದೊಳುತವೆ ಮುದವಳಿದಿರು ತತ್ವ ಸಂತತಿಯನು ।
ವಿವರಿಸಿ ನೋಡೆಂದು ತಿಳಿಪುವ || ೩ ||
ಬಳಸದಿರದ್ವೈತವನು ಬಾಹ್ಯದಲಿ ನಿಂ ।
ನೊಳಗೇಕೋಭಾವನೆಯೊಡಗೊಡು ।
ತಿಳಿದು ಸಮಯ ನಿಷ್ಠೆಗಲಿ ವೇದವಿಧಿಭಕ್ತಿ ।
ಗಳನಗಲದಿರೆಂದುಸುರುವ || ೪ ||
ಆರುನಾನೆಂದು ವಿಚಾರಿಸು ವಿಷಮಸಂ ।
ಸಾರವಿದನುಕನಸೆಂದರಿ ।
ಮಾರ ಮರ್ದನ ಶಂಭುಲಿಂಗವ ನೊಲಿಸಿಗಂಭೀರಸುಖದೊಳಿರೆಂದರುಪುವ ||

ಈ ರೀತಿ ಮಾರ್ಗದರ್ಶನವನ್ನು ನೀಡುವ ಗುರುವಿಗೆ ಶರಣಾಗತರಾಗಬೇಕು.

ಮನಸ್ಸನ್ನು ದೇವರ ಕಡೆಗೆ ಹೊರಳಿಸಬೇಕು ಈ ಕಾರ್ಯಕ್ಕೆ ಪ್ರಯತ್ನ ಅತ್ಯ ವಶ್ಯವಾಗಿದೆ. ಮನಸ್ಸನ್ನು ದೇವರ ಧ್ಯಾನದ ಕಡೆಗೆ ಹೊರಳಿಸಿದರ ಮನಸ್ಸಿನಲ್ಲಿ

ಬಂಡಾಯದ ಅಲೆಗಳೇ ಳುವದಿಲ್ಲ ಮನಸ್ಸನ್ನು ಒಂದು ಹಂತಕ್ಕೆ ತಂದುನಿಲ್ಲಿಸಿದವನಿಗೆ ಮುಮುಕ್ಷು ಎನ್ನುವರು. "ಮುಮುಕ್ಷು" ಎಂದರೆ ಮೋಕ್ಷವನ್ನು ಬಯಸುವಾತ.

ಮಾನವತ್ವದಿಂದ ದೇವತ್ವಕ್ಕೆ ಹೋಗುವದಾರಿ ದುರ್ಗಮವಾಗಿದೆ. ದೇವತ್ವದ ಸ್ಥರಕ್ಕೇರ ಬೇಕಾದರೆ ಮಾನವತ್ವದ ಸ್ಥರವನ್ನು ದಾಟಿ ಹೋಗಬೇಕು. ಭೂಮಿಯ ಕಕ್ಷೆಯಿಂದ ಬಾಹ್ಯಾಕಾಶಕ್ಕೆ ನೆಗೆಯಬೇಕಾದರೆ ನೌಕೆಗೆ ಯಾವರೀತಿ ಬಲವಾದ ಸ್ಫೋಟದ ಆವಶ್ಯವಿದೆಯೋ ಅದೇರೀತಿ, ಮಾನವತ್ವದಿಂದ ದೇವತ್ವಕ್ಕೆ ನೆಗೆಯಲು "ಗುರುಕಾರುಣ್ಯ" ವೆಂಬ ಆಸ್ಫೋಟನೆಯ ಅವಶ್ಯಕತೆಯಿದೆ. ಅಂತರಿಕ್ಷನೌಕೆಗೆ ಭೂಮಿಯ ಗುರುತ್ವಾಕರ್ಷಣೆಯ ಹಿಂದೆಎಳೆತವಿರುವಂತೆಯೇ ಮಾನವನಿಗೆ (ಮನುಷ್ಯನಲ್ಲಿ) ಸ್ಥೂಲ, ಸೂಕ್ಷ್ಮ, ಕಾರಣ, ಶರೀರಗಳು ಗುರುತ್ವಾಕರ್ಷಣೆ ಜಗ್ಗುತ್ತಿರುತ್ತದೆ. ಆದುದರಿಂದ ಅದನ್ನು ತಪ್ಪಿಸಲು ಗುರುಕಾರುಣ್ಯ" ವೆಂಬ ಸ್ಫೋಟ ಅತೀ ಅವಶ್ಯವಿದೆ. ಗುರುಕಾರುಣ್ಯ ವಿನಹ ದೇವತ್ವದ ಕಕ್ಷೆಗೆ ನೆಗೆಯುವದು ಸಾಧ್ಯವಾಗುವದಿಲ್ಲ. ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳ ಪರದೆಯನ್ನು ಹರಿದು ಭೂಮಿ, ಅಪ್ಪು, ತೇಜ, ವಾಯು, ಅಗ್ನಿ, ಆಕಾಶ, ಸೂರ್ಯ ತತ್ವಗಳ ಹಂಗನ್ನು ಅಷ್ಟಮಹಾಸಿದ್ಧಿಗಳ ಬಲದಿಂದ ಹರಿದು ಸೂರ್ಯ ಮಾರ್ಗದಿಂದಲೇ ದೇವತ್ವದ ಕಕ್ಷೆಗೆ ಅಂದರೆ ಪರಮಾತ್ಮನೆಡೆಗೆ ಗುರುವು ಒಮ್ಮೆ ಬಲವಾಗಿ ನೂಕಿದರಾಯಿತು ಮುಂದೆ ತನ್ನಷ್ಟಕ್ಕೆ ತಾನೇ ದಡ ಸೇರಬಹುದು,

ಸ್ವ ಪ್ರಯತ್ನದಿಂದ ಪರಮಾತ್ಮನ ಸಾಮಿಪ್ಯ ಪಡೆಯಬಹುದು. ಆಗಲೂ ನಿತ್ಯಾ ನಿತ್ಯ ವಿವೇಕದಿಂದ ಪರಮಾತ್ಮನಲ್ಲಿ ನಿತ್ಯ ಲೀನವಾಗುವ ಕಲೆಯನ್ನು ಕರಗತ ಮಾಡಿಕೊಂಡು ಯಾವಾಗ ಬೇಕಾದಾಗ ಖಾಯುಮ್ ಕರಿಸಿ ಲೀನವಾಗಲು ಬರುವದು.

ವಿಚಿತ್ರವೆಂದರೆ ಎಲ್ಲವನ್ನೂ ದೇಹವಿರುವಾಗಲೇ ಮಾಡಬೇಕು. ಏಕೆಂದರೆ ದೇಹ ಬಿದ್ದಮೇಲೆ ಜೀವಾತ್ಮನು ತನ್ನಿಂದ ತಾನೇ ಪರಮಾತ್ಮನನ್ನು ಸೇರಲಾರದು. ಅದಕ್ಕೆ ಕಾರಣ ಸ್ಪಷ್ಟವಾಗಿದೆ ಕರ್ಮಾದಿ ಪಾಪಪುಣ್ಯಗಳೆಂಬನೆಂಬ ಆಕಾಶ ನೌಕೆಯನ್ನು ಮತ್ತೆ ಭೂಮಿಗೇ ತಂದು ಕುಪ್ಪಳಿಸುತ್ತದೆ. ದೇಹವು ಪಂಚಮಹಾ ಭೂತಗಳಿಂದ ತಯಾರಾಗಿರುವುದರಿಂದ ಜಡವಾಗಿದೆ. ಅದನ್ನು ಅವುಗಳಿಗೆ ಕೊಡಲೇ ಬೇಕಾಗುವುದು. ಸಶರೀರ ಮುಕ್ತಿ ಯಾರಿಗೂ ಸಾಧ್ಯವಿಲ್ಲ ಅದೂ ಅಲ್ಲದೆ ದೇಹಕ್ಕೆ ಅವಸಾನ ನಿಶ್ಚಿತವಿದೆ. ಅದೇಆತ್ಮವು ಅವಿನಾಶಿಯಾಗಿದ್ದು ದೇಹಗಳಲ್ಲಿ ವಾಸಿಸಿ ಪಾಪ ಪುಣ್ಯಗಳ ಹಂಗು ಹರಿದು ಹಗುರವಾದರೆ ಪರಮಾತ್ಮನೊಂದಿಗೆ ಲೀನವಾಗುವದು.

ಆದುದರಿಂದ ದೇಹವಿರುವಾಗ, ಬುದ್ಧಿ, ವಿವೇಕರ ಸೇವೆ ಲಭ್ಯವಿರುವಾಗ, ಇದ್ದ ದೇಹ ಸದೃಢವಿದ್ದಾಗ ಪರಮಾತ್ಮನೊಂದಿಗೆ ಲೀನ ಹೊಂದುವ ತಾಲೀಮು ಮಾಡುತ್ತಲಿರಬೇಕು. ಪ್ರತಿನಿತ್ಯವೂ ತಾಲೀಮು ಮಾಡುತ್ತಿರಬೇಕು. ಅಂದರೆ ಮಾತ್ರ ಯಾವಾಗಬೇಕಾದರೂ ಕೊನೆಯ ಘಳಿಗೆಯಲ್ಲಿ ಥಕ್ಕನೆ ಪರಮಾತ್ಮನೊಂದಿಗೆ ಲೀನ ಹೊಂದಲು ಬರುತ್ತದೆ. ಇದರಲ್ಲಿ ಕೂದಲೆಳೆ ಕೊಂಕಿದರೆ ಮುಗಿಯಿತು. ಮತ್ತೆ ಅ, ಆ, ಇ, ಈ ಕಲಿಯಬೇಕಾಗುತ್ತದೆ.

# ನಾಳಿನ ವಿಮಾನ–ಆಸ್ಪ್ರೇ

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ.

ಮುಂದಿನ ವರ್ಷಗಳಲ್ಲಿ ತಾಂತ್ರಿಕ ದೃಷ್ಟಿಯಿಂದ ವಿಕಸಿತವಾದ ದೇಶಗಳಲ್ಲಿ ನಾಗರಿಕ ಹಾಗೂ ಸಾಮಾಜಿಕಮಹತ್ವದವಿಮಾನಗಳು ಹೆಲಿಕಾಪ್ಟರ್‌ದಂತೆ ಕಡಿಮೆ ಜಾಗದಲ್ಲಿ ಇಳಿಯಲೂ, ಆರಂಭದಲ್ಲಿ ಸುತ್ತುವ ಜಂಜಡವಿಲ್ಲದೆ ನೇರಾಗಿ ಆಕಾಶಕ್ಕೆ ನೆಗೆಯಲೂ ಅನುಕೂಲವಾಗುವಂತೆ ನಿರ್ಮಾಣವಾಗಲಿವೆ. ಅಮೇರಿಕೆ ಯಲ್ಲಿ ನಿರ್ಮಿತವಾದ ಈ ಹೊಸಯಾನಕ್ಕೆ 'ಆಸ್ಪ್ರೇ' ಎಂದು ಹೆಸರು. ಹಾರುವ ಮೊದಲು ಇವು ಹೆಲಿಕಾಪ್ಟರಿನಂತೆ ಮೇಲೇರುವುವು. ಆ ಬಳಿಕ ಇವುಗಳ ರೆಕ್ಕೆಗಳ ಮೇಲಿರುವ ರೋಟರ್ ತಾವಾಗಿಯೇ ೯೦ ಡಿಗ್ರಿ ಕೋನದಲ್ಲಿ ಬಾಗುವುವು. ಮರು ಕ್ಷಣವೇ ಈ ವಿಮಾನಗಳು ಆಕಾಶದಲ್ಲಿ ಸುತ್ತತೊಡಗುವುವು.

ಹೆಲಿಕಾಪ್ಟರ್ ಹಾಗೂ ವಿಮಾನ— ಈ ಎರಡರ ಗುಣಗಳುಳ್ಳ ಯಾನ ಗಳನ್ನು ನಿರ್ಮಿಸಿಸಬೇಕೆಂದು ಮೊತ್ತಮೊದಲು ೧೮೪೦ ರ ಸುಮಾರಿಗೆ ಸರ್ ಜಾರ್ಜ್ ಕೇಲೇ ಯೋಚಿಸಿದ್ದರು. ಅಂದಿನಿಂದಲೇ ಈ ಕನಸನ್ನು ನನಸಾಗಿಸಲು ತಂತ್ರಜ್ಞರೂ ಇಂಜಿನೀಯರರೂ ನಿರಂತರ ಪ್ರಯತ್ನಿಸುತ್ತಿದ್ದರು. ಆದರೆ ಅವರಿಗೆ ಇತ್ತೀಚೆಗಷ್ಟೆ "ಆಸ್ಪ್ರೇ" ಯ ರೂಪದಲ್ಲಿ ಸಫಲತೆ ಸಿಕ್ಕಿತು. ಅಮೇರಿಕೆಯ "ಬೋಯಿಂಗ್ ಬರ್ಟಾಲ್" ಹಾಗೂ "ಬೆಲ್ ಟೆಕ್ಸಾಟ್ರಾನ್" ಎಂಬೆರಡು ಕಂಪೆನಿಗಳು ಆಸ್ಪ್ರೇ ನಿರ್ಮಾಣದಲ್ಲಿ ತೊಡಗಿವೆ. ೧೯೯೧ ರವೇಳೆ ಅಮೇರಿಕೆಯ ಸೇನೆ ಈ ವಿಮಾನ ವನ್ನು ಬಳಸಲಾರಂಭಿಸುವುದು.

ಕಳೆದ ೩೦ ವರ್ಷಗಳ ನಿರಂತರ ಪರಿಶ್ರಮದ ಫಲವೇ ಆಸ್ಪ್ರೇ. ಇದರ ನಿರ್ಮಾಣಕ್ಕೆ ಬಳಸಲಾದ ಮಿಶ್ರವಸ್ತುಗಳಲ್ಲಿ ೨೦% ಫೈಬರ್‌ಗ್ಲಾಸ್, ೨೦% ರಷ್ಟು ಲೋಹ ಹಾಗೂ ೬೦% ರಷ್ಟು ಇಪಾಕ್ಸೀ ಗ್ರೆಫಾಯ್ಡ್ ಇದೆ. ಆಸ್ಪ್ರೇ ನಿರ್ಮಾಣದಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಪ್ರಣಾಳಿಗಳನ್ನು ಬಳಸಿಕೊಳ್ಳಲಾಗಿದೆ. ವಿಮಾನದೊ ಳಗೆ ಕುಳಿತ ಚಾಲಕನಿಗೆ ಅಗತ್ಯದ ಸೂಚನೆಗಳನ್ನು ನೀಡಲು ಅಂಕಗಳ ಸಂಕೇ ತಗಳನ್ನು ಉಪಯೋಗಿಸಲಾಗಿದೆ. ಈ ವಿಮಾನಕ್ಕೆ ಎರಡು ಇಂಜಿನ್‌ಗಳಿವೆ. ಕಾರ ಣಾಂತರದಿಂದ ಒಂದು ಇಂಜಿನ್ ಕೆಟ್ಟುಹೋಯಿತೆಂದರೆ ಎರಡನೇ ಇಂಜಿನ್ ತಕ್ಷಣ ಕೆಲಸ ಮಾಡತೊಡಗುತ್ತದೆ.

ಅಮೇರಿಕೆಯ ಭೂಸೇನೆ ತನ್ನ ಎಫ್–೧೮ ವಿಮಾನಗಳ ಇಂಜಿನ್‌ಗಳನ್ನು ಅವುಗಳ ನಿರ್ದಿಷ್ಟ ಸ್ಥಾನಗಳಿಗೆ ತಲುಪಿಸಲು ಈ ವಿಮಾನಗಳನ್ನು ಬಳಸಿಕೊಳ್ಳಲು

ಬಯಸುತ್ತದೆ. ಅಗತ್ಯವಿದ್ದರೆ ಈ ವಿಮಾನ ನೀರಲ್ಲೂ ಇಳಿಯುಬಹುದು. ಎಂತಲೇ ಅಮೇರಿಕೆಯ ನೌಕಾಪಡೆ ಜಲಾಂತರ್ಗಾಮಿಗಳನ್ನು ಭೇದಿಸಲೂ ದಾರಿತಪ್ಪಿದ ಸೈನಿಕರನ್ನು ಹುಡುಕಲೂ ಈ ವಿಮಾನವನ್ನು ಬಳಸಬಯಸುತ್ತದೆ. ಆಸ್ಪ್ರೇಯನ್ನು ನಾಗರಿಕ ಹಾರಾಟಕ್ಕೆ ಯೋಗ್ಯವಾಗುವಂತೆ ಮಾಡಬೇಕಾದರೆ ಇನ್ನೂ ಕೆಲವು ಬದಲಾವಣೆಗಳು ಅಗತ್ಯ.

ಕಾಲ ಕಳೆದಂತೆ, ಮಹಾನಗರಗಳ ನಡುವೆ ಪ್ರವಾಸ ಮಾಡಲು ಇಂಥ ವಿಮಾನಗಳನ್ನು ಬಳಸಿ ವಿಮಾನ ನಿಲ್ದಾದಲ್ಲುಂಟಾಗುವ ಜನ ಸಂದಣಿಯನ್ನು ತಗ್ಗಿಸಬಹುದು. ಆಗ ಅಂತರರಾಷ್ಟ್ರೀಯ ಹಾರಾಟಗಳಿಗೆ ಹೆಚ್ಚು ಹೆಚ್ಚು ಸೌಕರ್ಯ ಒದಗಿಸಬಹುದು. ಈ ಯಾನದಿಂದ ಹೆಲಿಕಾಪ್ಟರ್‌ಗಿಂತ ಕಡಿಮೆ ಶಬ್ದ ಹೊರಡುವುದು. ಇದಕ್ಕೆ ಲಂಡನ್ನಿನ ನವನಿರ್ಮಿತ ಡಾಕ್‌ಲ್ಯಾಂಡ್ ವಿಮಾನ ನಿಲ್ದಾಣದಲ್ಲಿ ಇಳಿಯಲೂ, ಅಲ್ಲಿಂದ ಹಾರಾಟ ನಡೆಸಲೂ ಅನುಕೂಲವಾಗುವುದು. "ಡೀ ಹೆವೀಲ್ಯಾಂಡ್ ಡೇಸ್ ೭" ಎಂಬ ವಿಮಾನಕ್ಕೆ ಮಾತ್ರ ಇಲ್ಲಿ ಇಳಿಯಲು ಅನುಮತಿಯಿದೆ. ಅಮೇರಿಕೆಯ 'ನಾಸಾ' ಸಂಸ್ಥೆ ನಡೆಸಿದ ಸರ್ವೇ ಪ್ರಕಾರ ಈ ವಿಮಾನಕ್ಕೆ ಉಜ್ವಲ ಭವಿಷ್ಯವಿದೆ. ಎಲ್ಲ ರೀತಿಯಿಂದಲೂ ಇದು ನಮಗೆ ಅನುಕೂಲವೆನಿಸಬಹುದು.

(ಹಿಂದಿಯಿಂದ)

---

## "ಕಮ್ಮಾರ ತಮ್ಮಣ್ಣ"

ಎಂ. ಆರ್. ಬೈಲಪ್ಪ, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ

ಓ! ಓ! ಪಟಪಟನೆ ಸದ್ದು ಮಾಡುತಿರುವ ಕಮ್ಮಾರ ತಮ್ಮಣ್ಣ
ಅವ ನಮ್ಮ ಹಳ್ಳಿಯಲಿ ಕೆಲವರಿಗೆ ಅಣ್ಣ
ಕಾಣುತಿದೆ ಅವನ ಬೆನ್ನು ಹರಿದ ಅಂಗಿಯಿಂದ
ಹೊಡೆಯುತ್ತಿರುವ ಕಾದ ಕಬ್ಬಿಣದಿಂತದೇಕಮನದಿಂದ
ಇಂದೇಕೆ ಕೆಲಸಮಾಡುವನು ದೀವಳಿಗೆ ಹಬ್ಬ
ಅವನಾಚರಿಸುವುದೊಂದೇ ಯುಗಾದಿಯ ಹಬ್ಬ
ಗೀತೆಯನು ಓದಿದ ಅದೃಷ್ಟ ತಾನಲ್ಲ
ಅದರ ತತ್ವವಂ ಪಾಲಿಸದ ಮೂರ್ಖ ಅವನಲ್ಲ
ಕರ್ಮಯೋಗದ ರಹಸ್ಯ ಓದಿಲ್ಲ ಅವನು
ಸಹೃದಯರಿಗೆ ಚಿಂತನ ಶೀಲ ತಾನು.



ಸಿದ್ಧಗಂಗಾ ಕಮ್ಮಟದಲ್ಲಿ 1939 ರಿಂದ 1944ರವರೆಗೆ ವೇದ-ಸಂಸ್ಕೃತ ಮತ್ತು ಪ್ರೌಢ ಶಿಕ್ಷಣ ಪಡೆದ ಶ್ರೀ ಆರ್.ಎಂ.ಬಿ. ಆರಾಧ್ಯರಿಗೆ ತಾ|| 23-3-1991 ದೆಹಲಿಯಲ್ಲಿ ರಾಷ್ಟ್ರಪತಿ ಶ್ರೀ ಆರ್. ವೆಂಕಟರಾಮನ್ ಅವರು ಪದ್ಮಶ್ರೀ ಪ್ರಶಸ್ತಿ ಪದಕ ಮತ್ತು ಸನ್ನದ್ದನ್ನು ನೀಡಿ ಗೌರವಿಸುತ್ತಿರುವುದು.

# ಸಿದ್ಧಗಂಗಾ ಕಮ್ಮಟದಲ್ಲಿ ಅರಳಿದ ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯ.

ಪ್ರಶಸ್ತಿ ಸನ್ಮಾನಗಳು ಪ್ರಾಪ್ತವಾದಾಗ ಸಮಾಜ, ಲೋಕ ವ್ಯಕ್ತಿಯ ಕಡೆಗೆ ಕಣ್ಣರಳಿಸುವುದು ಸಹಜ. ಆದರೆ ಅದರ ಹಿಂದೆ ವ್ಯಕ್ತಿ ನಡೆಸಿದ ಸಾಧನೆ, ಮಾಡಿದ ಸೇವೆ, ಬಾಳಿದರೀತಿಯನ್ನು ಗಮನಿಸಿದಾಗ ಪ್ರಶಸ್ತಿಗಳು ಲಭ್ಯವಾದದ್ದರ ಔಚಿತ್ಯ ಅರ್ಥವಾಗುತ್ತದೆ. ಪ್ರಶಸ್ತಿಯಿಂದ ವ್ಯಕ್ತಿಯ ಜವಾಬ್ದಾರಿ ಇನ್ನೂ ಹೆಚ್ಚಾಗುತ್ತದೆ. ತಾನು ನಡೆದು ಬಂದ ದಾರಿಯ ಸಿಂಹಾವಲೋಕನ ಒಂದು ಕಡೆಗಾದರೆ ನಡೆಯಬೇಕಾಗಿರುವ ಮುಂದಿನ ಮಾರ್ಗದ ರೂಪ ರೇಷೆಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಒಂದುಕಡೆಗೆ ಸಂತೃಪ್ತಿ ಬಂದರೆ ಮತ್ತೊಂದು ಕಡೆಗೆ ಹೊಣೆಗಾರಿಕೆ ಕೈಬೀಸಿ ಕರೆಯುತ್ತದೆ. ಮನುಷ್ಯ ಸಂಘಜೀವಿ ಒಬ್ಬಂಟಿಯಾಗಿ ಬಾಳಲಾರ. ಸಂಘದ ಸಂಪರ್ಕದಿಂದ ಸುಸಂಸ್ಕೃತನಾಗುತ್ತಾ ನಡೆಯುತ್ತಾನೆ. ಒದಗಿದ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡು ವಿಕಾಸಪಥದಲ್ಲಿ ಹೆಜ್ಜೆಹಾಕುವವರು ಸಾವಿರಕ್ಕೆ ಒಬ್ಬರೋ ಲಕ್ಷಕ್ಕೆ ಒಬ್ಬರೋ ಎನ್ನಬೇಕಾಗುತ್ತದೆ. ಜೀವನ ತನಗೊಬ್ಬನಿಗೆ ಮಾತ್ರವಲ್ಲ ತನ್ನ ಸಹ ಜೀವಿಗಳಿಗೂ ಇದೆ ಎಂಬ ಭಾವನೆ ಅಂಕುರವಾದಾಗ ನಿಸ್ವಾರ್ಥ ಮಾರ್ಗದಲ್ಲಿ, ಸೇವಾ ಪಥದಲ್ಲಿ ಮುಂದುವರಿಯುತ್ತಾನೆ. ಅದಕ್ಕೆ ಪ್ರೇರಕವಾದ ಮೂಲ ಪರಿಸರವನ್ನು ಮನದುಂಬಿ ಸ್ಮರಿಸುತ್ತಾನೆ ಬಾಲ್ಯದಲ್ಲಿ ತನಗೆ ದೊರಕಿದ ಅವಕಾಶಗಳನ್ನು ಕುರಿತು ಚಿಂತನ ಮಂಥನ ಮಾಡುತ್ತಾನೆ. ಕೃತಜ್ಞತಾ ಭಾವನೆಯಿಂದ ಸ್ಮರಿಸಿಕೊಳ್ಳುವ ಹೃದಯವಂತಿಕೆಯನ್ನು ವ್ಯಕ್ತಮಾಡುತ್ತಾನೆ. ಇಂತಹ ಶ್ರೀ ಆರ್.ಎಂ.ಬಿ. ಆರಾಧ್ಯರನ್ನು ಕುರಿತು ಎರಡು ಮಾತನ್ನು ಇಲ್ಲಿ ಬರೆಯುತ್ತಿದ್ದೇನೆ.

ಸಿದ್ಧಗಂಗಾಮಠ ಬಸವತತ್ವಗಳ ಪ್ರಯೋಗಶಾಲೆ. ಶರಣ ಸಿದ್ಧಾಂತದ ಶಿವಕಮ್ಮಟ. ಇಲ್ಲಿತಯಾರಾದ ನಾಣ್ಯಗಳಿಂದು ರಾಷ್ಟ್ರಸೇವೆಯಲ್ಲಿ ಸದ್ದಿಲ್ಲದ ಸೇವೆಯನ್ನು ಮಾಡುತ್ತಿರುವುದು ಸಂತೋಷದ ಸ್ಮರಣೆ. ಪೂಜ್ಯ ಶ್ರೀಗಳವರ ದಿವ್ಯ ವ್ಯಕ್ತಿತ್ವದಿಂದ ಸ್ಫೂರ್ತಿ ಪಡೆದೇ ಸೇವಾ ಜೀವನದಲ್ಲಿ ನಡೆಯುತ್ತಿರುವುದು ಲೋಕವಿದಿತವಾದ ಸಂಗತಿ. ಹೀಗೆ ಸೇವಾದೀಕ್ಷೆಯನ್ನು ಸ್ವಪ್ರೇರಣೆಯಿಂದ ವಿದ್ಯುಕ್ತವಾಗಿ ಸ್ವೀಕರಿಸಿದವರು ಶ್ರೀ ಆರ್. ಎಂ. ಬಿ. ಆರಾಧ್ಯರು. ಗೊಟ್ಟಿಗೆರೆಯಿಂದ ಶ್ರೀ ಸಿದ್ಧಗಂಗಾಮಠಕ್ಕೆ ಪ್ರೌಢಶಿಕ್ಷಣಕ್ಕೆ ಬಂದರು. ಪೂಜ್ಯ ಶ್ರೀ ಉದ್ಧಾನ ಶಿವಯೋಗಿಗಳ ಹಾಗೂ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳ ಮಂಗಳ ದೃಷ್ಟಿಗೆ ಪಾತ್ರರಾಗಿ ವೇದ ಸಂಸ್ಕೃತ ಅಧ್ಯಯನ ಮುಗಿಸಿ ಹುಟ್ಟಿದೂರಿಗೆ ತೆರಳಿ ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದರು. ದುಡಿಮೆಯನ್ನು ದೇವರೆಂದು ಆರಾಧಿಸಿದ ಆರಾಧ್ಯರು ಮೆಟ್ಟಿಲಾಗಿ ಮೇಲೇರುತ್ತ ನಡೆದರು.

ನಿಸ್ವಾರ್ಥ ಮನೋಧರ್ಮಿಗಳಿಗೆ ದುಡಿಮೆ ಲೋಕ ಹಿತಕ್ಕಾಗಿ ಎಂಬುದು ಬಹುಬೇಗ ಹೊಳೆದು ಬಿಡುತ್ತದೆ. ಶ್ರೀ ಮಠದ ಪರಿಸರದಲ್ಲಿ ಸುಪ್ತವಾಗಿ ಅಡಗಿಕುಳಿತ ಸಂಸ್ಕಾರ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗುವಂತೆಮಾಡಿತು. ಆರಾಧ್ಯರ ಶರಣ ಧರ್ಮ ಚತುರ್ ವರ್ಣಾತೀತವಾದುದು. ಲೋಕದ ಸಕಲಜೀವಿಗಳಿಗೂ ಲೇಸನ್ನೆ

ಬಯಸುವಂಥದು. ಅಂಥ ಧರ್ಮದ ಹಿನ್ನೆಲೆ ಪರಂಪರೆಯಿಂದ ಬಂದ ಶ್ರೀ ಆರಾಧ್ಯರಿಗೆ ಗಾಂಧೀಜಿಯವರ ಹರಿಜನೋದ್ಧಾರ ಚಳುವಳಿ ತುಂಬಾ ಪ್ರಿಯವಾಯಿತು. ಪರಿಣಾಮ ವಾಗಿ ಹರಿಜನ ಸೇವೆಯಲ್ಲಿ ತೊಡಗುವಂತಾಯಿತು. ಹ್ಯಾನ್ನು ಬಸವಾದಿ ಶರಣರು "ಮಹಾಮಾಹೇಶ್ವರ" ರೆಂದು ಗೌರವಿಸಿ ಅವರೊಂದಿಗೆ ಬಾಳಿದರೋ ಅಂಥ ಸಂಸ್ಕೃತಿ ಯಿಂದ ಬಂದ ರುದ್ರಾರಾಧ್ಯಾ ಮುದ್ದು ಬಸವಾರಾಧ್ಯರಿಗೆ ಹರಿಜನರ ಸೇವೆಯೆಂಬುದು ಗುರುಲಿಂಗಜಂಗಮಾರಾಧನೆಯೇ ಎನಿಸಿದ್ದು ಆಶ್ಚರ್ಯವೇನಲ್ಲ. ಸೇವೆಯನ್ನೇ ಜೀವನ ಶ್ರದ್ಧೆಯನ್ನಾಗಿ ಅಪ್ಪಿಕೊಂಡ ಆರಾಧ್ಯರಿಗೆ ಸೇವಾರ್ಪಣೆಗೆ ಒದಗಿ ಬಂದ ಅವಕಾಶಗಳು ಹಲವು ಹನ್ನೊಂದು. ಪದ್ಮಶ್ರೀ ಡಾ|| ಎಂ. ಸಿ. ಮೋದಿಯವರ ಉಚಿತ ನೇತ್ರ ಚಿಕಿತ್ಸಾ ಶಿಬಿರಗಳು, ಭಾರತೀಯ ವಿದ್ಯಾ ಸಂಸ್ಕೃತಿ ವಿದ್ಯಾಪೀಠ, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಎಸ್. ಜೆ. ಎಂ. ವಿದ್ಯಾಪೀಠ, ಭಾರತ ಸೇವಕ ಸಮಾಜ, ಭಾರತ ರೆಡ್‌ಕ್ರಾಸ್ ಸಂಸ್ಥೆ' ಕಿದ್ವಾಯ್ ಕ್ಯಾನ್ಸರ್ ಸಂಸ್ಥೆ, ಕರ್ನಾಟಕದ ಅಂಧರ ಕ್ಷೇಮಾಭ್ಯುದಯ ಸಂಸ್ಥೆ ಅಕ್ಕಮಹಾದೇವಿ ಸಮಾಜ, ಭಾರತದ ಸ್ಕೌಟ್ಸ್ ಮತ್ತು ಗೈಡ್ಸ್, ಮುಂತಾಗಿ ವಿಭಿನ್ನ ಕ್ಷೇತ್ರಗಳಲ್ಲಿ ಅಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಸೇವಾ ಪ್ರತಿಗಳಾಗಿಸದ್ದಿಲ್ಲದೆ ವಿನಮ್ರ ಸೇವೆಗೆ ಉದಾಹರಣೆಯಾಗಿದ್ದಾರೆ ಆರಾಧ್ಯರು. ಜೊತೆಗೆ ಶಿಕ್ಷಕರಾಗಿ, ಸಾರಿಗೆ ಸಂಸ್ಥೆಯ ಸ್ಥಾಪಕರಾಗಿ, ಇಂಜಿನಿಯರಿಂಗ್ ಕಂಟ್ರ್ಯಾಕ್ಟರಾಗಿ, ನಿವೇಶನಾಭಿವೃದ್ಧಿ ಉಸ್ತುವಾರಿದಾರರಾಗಿ ನಾಡಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ತನು ಮನ ಧನಗಳನ್ನು ತೊಡಗಿಸಿ ಸಮರ್ಪಣಾ ಭಾವದಿಂದ ದುಡಿಯು ತ್ತಿರುವ ಆರಾಧ್ಯರು ಪ್ರಶಸ್ತಿ, ಸನ್ಮಾನಗಳನ್ನೂ ಪಡೆಯಬೇಕೆಂದು ಸೇವೆ ಸಲ್ಲಿಸಿ ದವರಲ್ಲ. ಸಿದ್ಧಗಂಗಾಮಠದ ಪ್ರಸಾದದಿಂದ ತನುತುಂಬಿ, ಶ್ರೀ ಶ್ರೀ ಗಳವರ ಆಶೀ ರ್ವಾದದಿಂದ ಮನ ತುಂಬಿ, ಬಸವಧರ್ಮಸಿದ್ಧಾಂತದಿಂದ ಬದುಕು ತುಂಬಿ ಸೇವೆ ಮಾಡುತ್ತಾ ಬಂದಿದ್ದಾರೆ. 'ಗುರುಪಥ' ದಲ್ಲಿ ನಡೆದು 'ಶಿವಪಥ' ದತ್ತ ಸಮಾಜ, ದೇಶಗಳ ಸೇವೆಯಾಗಿದೆ. ಅಂಥವರಿಗೆ ರಾಜ್ಯ ಪ್ರಶಸ್ತಿ ಲಭ್ಯವಾದ ಸಂದರ್ಭದಲ್ಲಿ ಅನೇಕ ಸಂಘ ಸಂಸ್ಥೆಗಳೂ ಮಠಮಾನ್ಯಗಳು ಸತ್ಕರಿಸಿ ಗೌರವಿಸಿ ಸತ್ಪರಂಪರೆ ಯನ್ನು ಹೃದಯತುಂಬಿ ಕೊಂಡಾಡಿವೆ. ಇದೀಗ ಆರಾಧ್ಯರಿಗೆ ಭಾರತಸರ್ಕಾರ 'ಪದ್ಮಶ್ರೀ' ಪ್ರಶಸ್ತಿ ಪ್ರಧಾನಮಾಡಿ ಗೌರವಿಸಿದೆ. ನಿಸ್ವಾರ್ಥ ಸೇವೆಗೆ ಸಂದ ಎತ್ತರದ ಗೌರವ ಶ್ರೀ ಆರ್. ಎಂ. ಬಿ. ಆರಾಧ್ಯರಿಗೆ ಬಂದ ಈ ಸಂದರ್ಭದಲ್ಲಿ ಸಿದ್ಧಗಂಗಾ ಹೃತ್ಪೂರ್ವಕ ಶುಭಾಶಯಗಳನ್ನು ಅಭಿನಂದನಾಪೂರ್ವಕವಾಗಿ ಸಲ್ಲಿಸುತ್ತಿದೆ. ಶ್ರೀ ಆರ್. ಎಂ. ಬಿ. ಆರಾಧ್ಯರು ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಎಂಬು ದನ್ನು ಸ್ಮರಿಸುತ್ತ ಶ್ರೀಯುತರಿಗೆ ಸಂದಗೌರವ ಇಡೀ ಹಳೆಯ ವಿದ್ಯಾರ್ಥಿಗಳಿಗೇ ಸಂದಂತಾಗಿದೆ ಎಂದು ಹೆಮ್ಮೆತಾಳುತ್ತ, ಸಿದ್ಧಗಂಗಾ ಕಮ್ಮಟದಲ್ಲಿ ಅರಳಿದ 'ಪದ್ಮಶ್ರೀ ಆರಾಧ್ಯರಿಗೆ ಮತ್ತು ಅವರ ಕುಟುಂಬವರ್ಗದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಶ್ರೀ ಸಿದ್ಧಗಂಗಾ ಶ್ರೀ ಗುರು ಪರಂಪರೆ ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಹಾರೈಸುತ್ತದೆ ' ಸಿದ್ಧಗಂಗಾ '

# ಗ್ರಾಮಾಂತರ ಬಸವ ಜಯಂತಿ - 251 ರಿಂದ 257

ಆತ್ಮೀಯ ಶರಣ ಬಂಧು,

ಬಹಳ ದಿನಗಳಿಂದ ಬರೆಯಲಾಗಲಿಲ್ಲ. ಪರಮಪೂಜ್ಯ ಸಿದ್ಧಗಂಗೆಯ "ಅಪ್ಪ"ಗಳ ಅನೇಕ ಸಾಧನೆಗಳಲ್ಲೊಂದಾದ ಗ್ರಾಮಾಂತರ ಬಸವ ಜಯಂತಿ ಮಹಿಹ ಒಂದು ಮಹತ್ವದ ಸಾಧನೆಯೆಂಬುದನ್ನು ಇದೀಗ ಶಿಕ್ಷಣವೆತ್ತರು, ಸಮಾಜ ವಿಜ್ಞಾನಿಗಳು, ಸಂಸ್ಕೃತಿ ಪ್ರಸಾರಕರು, ಮಾನವ ಕಲ್ಯಾಣಾಕಾಂಕ್ಷಿಗಳು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದಾರೆಂಬುದನ್ನೂ ನಿಮಗೆ ತಿಳಿಸಲು ಸಂತೋಷವಾಗುತ್ತದೆ.

1979ರಲ್ಲಿ ಪ್ರಾರಂಭವಾದ ಗ್ರಾಮಾಂತರ ಬಸವಜಯಂತಿ ಇದೀಗ ಹದಿಮೂರನೆ ವರ್ಷಕ್ಕೆ ಪಾದಾರ್ಪಣೆಮಾಡಿ ಮುನ್ನಡೆದಿದೆ. ಪರಿವರ್ತನೆಯ ಫಲಿತಳದ ಒಳನೋಟವನ್ನು ತೋರಿಸುತ್ತಾ ನಡೆದಿದೆ. ಬಸವತತ್ವವನ್ನು ಅರ್ಥಮಾಡಿಕೊಳ್ಳಬೇಕೆಂಬ ಹಂಬಲ ಇಂದು ಎಲ್ಲರಿಗಿಂತ ಮಣ್ಣಿನ ಮಕ್ಕಳಲ್ಲಿ ತೀವ್ರವಾಗಿರುವುದು ಸಂತೋಷಕರವಾದುದು.

ಪರಮಪೂಜ್ಯರು ರೂಪಿಸಿರುವ ಈ ಬಸವ ಯಾತ್ರೆಯಲ್ಲಿ ಧರ್ಮಗುರುಗಳು ವಿದ್ವಾಂಸರು, ಸಾಮಾಜಿಕತಜ್ಞರು, ರಾಜಕಾರಣಿಗಳು. ಶಿಕ್ಷಣಪಟುಗಳು ಆಸಕ್ತಿಯಿಂದ ಭಾಗವಹಿಸುತ್ತಿದ್ದಾರೆ. ಆದರಲ್ಲೂ ನಾಟಕ ಮಾಧ್ಯಮವನ್ನು ಹೃದಯಾರೆ ಸ್ವಾಗತಿಸುತ್ತಾರೆ.

1991ರ ಫೆಬ್ರವರಿ 12 ರಿಂದ ಪ್ರಾರಂಭವಾದ ಪ್ರಸ್ತುತ ಬಸವಯಾತ್ರೆ ನಿರಂತರವಾಗಿ ಹತ್ತು ಪುಣ್ಯ ಗ್ರಾಮಗಳಲ್ಲಿ ಕಾರ್ಯಕ್ರಮ ಜರುಗಿಸಿದೆ. ದಿನಾಂಕ 4-3-91 ರಂದು ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಗುಡಿಸರಗೂರಿನಲ್ಲಿ ನಡೆದ ಸಮಾರಂಭದಲ್ಲಿ ಕನಕಪುರ ದೇಗುಲ ಮಠದ ಶ್ರೀಗಳು, ಮರಳೆ ಗವಿಮಠದ ಶ್ರೀಗಳು, ರಾಜಾಪುರದ ಮಠದ ಶ್ರೀಗಳು, ಬೇವೂರು ಶ್ರೀಗಳು ಭಾಗವಹಿಸಿ ಬಸವ ತತ್ವಗಳ ಪರಿಚಯ ಮಾಡಿಕೊಟ್ಟರು. ರಾತ್ರಿ ಪ್ರದರ್ಶಿತವಾದ ನಾಟಕವನ್ನು ವೀಕ್ಷಿಸುವ ಸಲುವಾಗಿ ಜನ ಜಾತ್ರೆಯನ್ನು ನಿರೀಕ್ಷಿಸಿದ್ದ ಕಾರ್ಯಕರ್ತರು ಅಲ್ಲಲ್ಲಿ ಟಿ.ವಿ. ಗಳನ್ನು ಅಳವಡಿಸಿದ್ದು ಸೂಕ್ತವಾಗಿತ್ತು. ಪರಮ ಪೂಜ್ಯಶ್ರೀ ಶ್ರೀಗಳವರು "ಬಸವಣ್ಣ ನಮಗೆ ಜೀವನ ಕಲೆಯನ್ನು ಕಲಿಸಿಕೊಟ್ಟ ಮಹಾನುಭಾವ" ಎಂದು ಆಶೀರ್ವಚನ ನೀಡಿದರು.

ದಿನಾಂಕ 6-3-91 ರಂದು ಕುಣಿಗಲ್ ತಾಲ್ಲೂಕು ಬೆಟ್ಟಳ್ಳಿ ಮಠದಲ್ಲಿ ಜಯಂತಿ ಯೋಜಿತವಾದಾಗ ಸಮಾವೇಶಿತವಾದ ಜನಸಮುದಾಯ ವಿಶೇಷವಾಗಿದ್ದು ಶ್ರೀಮಠದ ಪೂಜ್ಯ ಶ್ರೀ ಶ್ರೀ ನೀಲಕಂಠಶಿವಾಚಾರ್ಯಸ್ವಾಮಿಗಳವರ ಹೃದಯ ತುಂಬಿ ಬರುವಂತಾಯಿತು. ಉರಿಗದ್ದಿಗೇಶ್ವರನ ಕೃಪೆಯಿಂದ ಮಳೆಕಾಣಿಸಿಕೊಳ್ಳದೆ ನಿರಾಂತಕ ವಾಗಿ ನಾಟಕ ಪ್ರದರ್ಶಿತವಾಯಿತು. ಸಮಾರಂಭದಲ್ಲಿ ಅಂಕನಹಳ್ಳಿ ಶ್ರೀಗಳು, ಪ್ರೊ|| ಬಿ. ವೀರಭದ್ರಯ್ಯನವರು ಮಾತನಾಡಿದರು. ಪರಮ ಪೂಜ್ಯ ಶ್ರೀ ಶ್ರೀ ಸಿದ್ಧ ಗಂಗೆಯ 'ಅಪ್ಪ' ಗಳು ಆಶೀರ್ವಚನ ನೀಡುತ್ತ "ಬಸವಣ್ಣನಿಂದ ನಾವು ಕಲಿಯ ಬೇಕಾಗಿರುವ ಮಹೋನ್ನತ ಗುಣವೇದರೆ ಪ್ರಾಮಾಣಿಕವಾದ ಮಾನವೀಯತೆ" ಎಂದು ನುಡಿದರು.

ದಿನಾಂಕ 9-3-91ರಂದು ಹೊಳೆನರಸೀಪುರ ತಾಲ್ಲೂಕು ಟಿ.ಮಾಯಗೌಡನ ಹಳ್ಳಿಯಲ್ಲಿ ಬಸವಜಯಂತಿ ಆಚರಣೆ. ಎಲ್ಲಿಲ್ಲದಷ್ಟು ಭಕ್ತಾದಿಗಳು,

ಮಾಯಗೌಡನಹಳ್ಳಿ ಶ್ರೀ ಮಠದ ಪೂಜ್ಯ ಶ್ರೀ ಚಂದ್ರಶೇಖರ ಸ್ವಾಮಿಗಳ ಕ್ರತು ಶಕ್ತಿಯ ಜೀವಂತ ಉದಾಹರಣೆ ಆ ಸಮಾರಂಭ. ಸಚಿವರಾದ ಜಿ. ಪುಟ್ಟಸ್ವಾಮಿ ಗೌಡರು ಸಕ್ರಿಯ ಭಾಗಿಗಳಾಗಿ ಬೆರೆತದ್ದು ಮತ್ತಷ್ಟು ಶೋಭೆ ಎನಿಸಿತು. ಬೆಟ್ಟದ ಪುರದ ಶ್ರೀಗಳು, ಬೇವೂರು ಶ್ರೀಗಳು, ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ಅಧ್ಯಕ್ಷರಾದ ಶ್ರೀ ಚನ್ನಬಸಪ್ಪನವರು, ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಾತನಾಡಿ ಬಸವಣ್ಣನವರ ಜೀವನದ ವಿವಿಧ ಮುಖಗಳ ಪರಿಚಯ ಮಾಡಿ ಕೊಟ್ಟರು. ಅಧ್ಯಕ್ಷಸ್ಥಾನದಿಂದ ಸಿದ್ಧಗಂಗಾ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀ ರ್ವಚನ ನೀಡುತ್ತ 'ಬಸವಣ್ಣನವರಂಥ ಹೃದಯವಂತ ಮಹಾಸುಧಾರಕ ಮತ್ತೊಬ್ಬ ನನ್ನು ಕಾಣುವುದು ವಿರಳ' ಎಂದು ನುಡಿದರು.

23-3-91 ರಂದು ಚಿಕ್ಕಮಗಳೂರು ದೊಡ್ಡಕುರುಬರ ಹಳ್ಳಿ ಜಾಬಾಲಿ ಪುರ ಮಠದ, ಬಸವಮಂದಿರದಲ್ಲಿ ನಡೆದ ಬಸವಜಯಂತಿ ಅವಿಸ್ಮರಣೆಯವಾಗಿತ್ತು. ವ್ಯವಸ್ಥಿತವಾಗಿತ್ತು. ಪೂಜ್ಯ ಚಂದ್ರಶೇಖರಸ್ವಾಮಿಗಳ ಬಸವ ಭಕ್ತಿಯ ನಿಷ್ಠೆ ಎಲ್ಲ ಚಟುವಟಿಕೆಗಳಲ್ಲಿ ಅರಳಿದ್ದು ಭಾಸವಾಗುತ್ತಿತ್ತು. ಜೊತೆಗೆ ಬಸವಧರ್ಮೀಯರಾದ ಶ್ರೀ ಎ. ಎಂ. ಬಸವೇಗೌಡರ ಸಹಕಾರ ಸಹಭಾಗಿತ್ವದಿಂದ ಕಾರ್ಯಕ್ರಮಕ್ಕೆ ವಿಶೇಷ ಕಳೆ ಕೂಡಿಬಂದಿತ್ತು. ಡಾ|| ಸಾ. ಶಿ. ಮರುಳಯ್ಯನವರು ಉಪನ್ಯಾಸ ಮಾಡುತ್ತ ಸಿದ್ಧಗಂಗೆಯ ಸ್ವಾಮಿಗಳಂಥ ಪರಮಪೂಜ್ಯರಿಂದ ಬಸವ ತತ್ವ ಪ್ರಚಾರಕ್ಕೆ ಬರುತ್ತಿ ರುವುದು ನಾಡಿನ, ಸಮಾಜದ ಪರಮ ಪುಣ್ಯೋದಯವೆಂದರು. ಶ್ರೀ ಎ.ಎಂ. ಬಸವೇ ಗೌಡರು, ಪ್ರೊ|| ವಿ. ಪಿ. ಸಂಗಮದ, ಶ್ರೀ ಕಾಳೇಗೌಡರು, ಶ್ರೀಮತಿ ಯಶೋದ,

ಶಾಸಕರಾದ ಶ್ರೀ ಸಗೀರ್ ಅಹಮ್ಮದ್, ಶ್ರೀ ಬೊಮ್ಮಲಿಂಗಯ್ಯನವರು ಮಾತನಾ ದರು. ಪ್ರಸ್ತುತ ಸಮಾರಂಭವನ್ನು ಸಚಿವ ಶ್ರೀಮಲ್ಲಿಕಾರ್ಜುನ ಪ್ರಸನ್ನ ಉದ್ಘಾಟಿಸಿದ ಸಂತಸಕ್ಕೆಡೆಮಾಡಿತು. 'ಜಗಜ್ಯೋತಿ ಬಸವೇಶ್ವರ' ನಾಟಕವನ್ನು ನೋಡಿದ ಬಸ ತತ್ವಪ್ರೇಮಿಗಳಿಗೆ ಅಪಾರ ಆನಂದವಾಯಿತು. ತಮಗಾದ ಸಂತೋಷವನ್ನು ವರ ಗಾರರೊಂದಿಗೆ ವ್ಯಕ್ತಪಡಿಸಿದರು. ಬಸವ ಬಂಧು ಬಾಣೂರು ಚೆನ್ನಪ್ಪನವರು ದೀರ್ಘ ಪತ್ರಬರೆದು ನಾಟಕವನ್ನು ಮೆಚ್ಚಿಕೊಂಡುದರ ಜೊತೆಗೆ ಪರಮ ಪೂಜ್ಯರ ಮಣಿಹ ಕೃತಜ್ಞತೆ ಸಲ್ಲಿಸಿದ್ದಾರೆ. ನಾಟಕದ ಬಗ್ಗೆ ತಮ್ಮ ಅನಿಸಿಕೆಗಳನ್ನು ಸೂಚಿಸಿದ್ದಾ

ಪರಮ ಪೂಜ್ಯ ಶ್ರೀ ಶ್ರೀಗಳು ಆಶೀರ್ವಚನನೀಡುತ್ತ "ಬಸವಣ್ಣ ಪವಾ ಪುರುಷನೆನ್ನುತ್ತಾರೆ. ಆದರೆ ಅಣ್ಣ ಮಾಡಿದ ಪವಾಡ ಬಹು ಅರ್ಥಪೂರ್ಣವಾದುದ ಮಾನವ ಮಾನವರನ್ನು ಪ್ರೀತಿಸುವಂಥದು. ಧರ್ಮದ ಹೆಸರಿನಲ್ಲಿ ಮನುಷ್ಯನನ ಅಗೌರವಿಸುವಂಥದಲ್ಲ ಬಸವಣ್ಣನ ಧರ್ಮ. ಶರಣು ಎಂದು ಹೇಳಿದ ಹರಳಯ ನಂಥವರಿಗೆ ಶರಣು ಶರಣಾರ್ಥಿ ಎಂದ ಸೌಜನ್ಯ ಪೂರ್ಣ ವಿನಯಶೀಲ ಧರ್ಮ ಎಂದ

ಉತ್ತರ ಕೊಡಗು ಕೊಡ್ಲಿಪೇಟೆಯ ಕಿರಿಕೊಡ್ಲಿಮಠದಲ್ಲಿ ದಿನಾಂಕ 27-3-9 ರಂದು ಜಯಂತಿ ಆಚರಣೆ ನಡೆದ ಸಭೆಯಲ್ಲಿ ಪೂಜ್ಯ ಶ್ರೀ ಮುಮ್ಮಡಿ ನಿರ್ವಾ ಸ್ವಾಮಿಗಳು, ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಶ್ರೀ ಶಿವಲಿಂಗ ಸ್ವಾಮಿಗಳು ಶ್ರೀ ತೆಂಕಲಗೋಡು ಸ್ವಾಮಿಗಳು, ಶ್ರೀ ಶಿವರುದ್ರಸ್ವಾಮಿಗಳು, ಶ್ರೀ ನೀಲಕಂ ಶಿವಾಚಾರ್ಯ ಸ್ವಾಮಿಗಳು, ಶ್ರೀ ಚಂದ್ರಶೇಖರ ಸ್ವಾಮಿಗಳು, ಪ್ರೊ|| ವಿ.ವಿ. ಸಂಗಮದ ಪ್ರೊ|| ಬಿ. ವೀರಭದ್ರಯ್ಯನವರು ಉಪನ್ಯಾಸ ನೀಡಿದರು. ಪರಮ ಪೂಜ್ಯ ಸಿದ್ಧಗಂಗ ಶ್ರೀಗಳು ಆಶೀರ್ವಚನ ನೀಡುತ್ತ 'ಬಸವಣ್ಣನ ವ್ಯಕ್ತಿತ್ವಕ್ಕೆ ಮಾರು ಹೋದ ಮಹಾತ ಗಾಂಧೀಜಿಯವರು 1924ರಲ್ಲಿ ಬೆಳಗಾಂನಲ್ಲಿ ನಡೆದ ಕಾಂಗ್ರೆಸ್‌ಅಧಿವೇಶನದಲ್ಲಿ ನುಡಿ ಮಾತುಗಳನ್ನು ಉಲ್ಲೇಖಿಸುತ್ತ " ಪ್ರತಿಯೊಬ್ಬ ವ್ಯಕ್ತಿಗೂ ಅವಕಾಶ ಕಲ್ಪಿಸಿ ಕೊಟ್ಟು ಅವನಲ್ಲಿ ಸುಪ್ತವಾಗಿರುವ ವ್ಯಕ್ತಿತ್ವ ವಿಕಾಸವಾಗುವುದಕ್ಕೆ ಅನುಕೂಲ ಮಾಡಿಕೊಡ ಬೇಕು" ಎಂಬ ಐನ್‌ಸ್ಟೈನನ ಸತ್ಯವಾಣಿಯನ್ನು ಉದಾಹರಿಸಿ ಬಸವಣ್ಣ ಮಾಡಿದ್ದನ್ನೆ ಅನಂತರದ ಮಹನೀಯರು ಪ್ರತಿಪಾದಿಸಿದ್ದಾರೆಂದು ಸಮರ್ಥನೆ ಮಾಡಿದರು. ಮಂಜು ಬೀಳುತ್ತಿದ್ದರೂ ನಾಟಕ ಮುಗಿದಾಗ ಪ್ರೇಕ್ಷಕರು ಕುಳಿತೇ ಇದ್ದ ದೃಶ್ಯ ಬಸವ ನಿಷ್ಠೆಯ ಉದಾಹರಣೆಯಾಗಿತ್ತು. ಶ್ರೀ ಮಠದ ಪೂಜ್ಯ ಶ್ರೀ ಸದಾಶಿವಸ್ವಾಮಿ ಗಳವರ ನೇತೃತ್ವದಲ್ಲಿ ವ್ಯವಸ್ಥೆ ಒಪ್ಪವಾಗಿತ್ತು

30-3-91 ರಂದು ಬೆಂಗಳೂರು ಜಿಲ್ಲೆ ಹೊಸಕೋಟೆಯಲ್ಲಿ ಬಸವ ಜಯಂತಿ ನಡೆದ ಸಮಾರಂಭದಲ್ಲಿ ರಾಜಪುರದ ಶ್ರೀ ಗಳು, ಕೊಳದ ಮಠದ ಶ್ರೀ ಗಳು, ಬೇಲಿ ಮಠದ ಶ್ರೀ ಗಳು, ನೆಲಮಂಗಲದ ಶ್ರೀ ಗಳು ಮಾತನಾಡಿದರು. ಪದ್ಮಶ್ರೀ ಗಳಿಸಿದ

ಮಾನ್ಯ ಶ್ರೀ ಆರ್. ಎಂ. ಬಿ. ಆರಾಧ್ಯರನ್ನು ಸನ್ಮಾನಿಸಿದರು. ಕಾರ್ಯಕ್ರಮ ರೂಪಿಸಿದ ಕರ್ನಾಟಕ ಗೃಹಮಂಡಳಿ ಕಾರ್ಯದರ್ಶಿಗಳಾದ ಶ್ರೀ ಸಿ. ಸೋಮಶೇಖರ್ ವರು ಸಿದ್ಧಗಂಗಾ ಶ್ರೀ ಮಠದ ಸೇವಾಮಣಿಹಕ್ಕೆ ಇಟ್ಟ ಮಹೋನ್ನತ ಕಳಶ ಪ್ರಮಾಂತರ ಬಸವಜಯಂತಿ ಯೋಜನೆ ಎಂದರು. ಪರಮ ಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಚನ ನೀಡುತ್ತ, 'ಬಸವಣ್ಣ ಸಮಗ್ರ ಕ್ರಾಂತಿಯ ಮೂಲಪುರುಷ' ಎಂದು ಮುಂದುವರಿದು ಮನುಷ್ಯನೆಂದರೆ ಕೇವಲ ದೇಹದಲ್ಲಿ ಆತ್ಮನೊಡಗೂಡಿದ ಅಖಂಡ ಶಿಲ್ಪ. ಆತ್ಮನಿಗಾಗಿಯೇ ದೇಹ. ಬರೀದೇಹಕ್ಕೆ ಬಸವಣ್ಣನವ ರೆಂದಿರುವಂತೆ 'ಒಂದಡಕೆ'ಯ ಬೆಲೆಯಿಲ್ಲ. ಆತ್ಮಜ್ಞಾನದ ಬೆಳಕಿನಲ್ಲಿ ಲೋಕ ಜೀವನವನ್ನು ಅರ್ಥಪೂರ್ಣವನ್ನಾಗಿ ಮಾಡಿಕೊಳ್ಳುವ ಕಲೆಯನ್ನು ಬಸವಾದಿ ಶರಣರು ಆಚರಿಸಿ ತೋರಿಸಿದ್ದಾರೆ 'ಅದು ನಮಗೆ ದಾರಿ ದೀಪವಾಗಬೇಕು" ಎಂದು ನುಡಿದರು. ನಾಟಕವನ್ನು ನೋಡಿದ ನಗರದ ಜನತೆ ತಮ್ಮ ಸಂತೋಷವನ್ನು ಪರಸ್ಪರ ಹೇಳಿ ಕೊಳ್ಳುತ್ತಿರುವುದನ್ನು ವರದಿಗಾರ ಕೇಳಿಸಿಕೊಂಡಾಗ ಪರಮ ಪೂಜ್ಯರ ಯೋಜನೆ ಸಾರ್ಥಕವಾಗುತ್ತಿರುವುದಕ್ಕೆ ಒಳಗೊಳಗೇ ಹಿಗ್ಗಿದ.

---

## ಅಭಿನಂದನೆ

ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದ ಮಹಾ ವಿದ್ಯಾಲಯದ ಪ್ರಾಧ್ಯಾಪಕರಾದ ಮಾನ್ಯ ಶ್ರೀ ವಿದ್ವಾನ್ **ಎಂ. ಮಲ್ಲವೀರಯ್ಯನವರಿಗೆ** ಮತ್ತು ಜ್ಯೋತಿಷ್ಯ ವಿದ್ವಾನ್ ಮಾನ್ಯ **ಶ್ರೀ ಶಂಕರ ಶಾಸ್ತ್ರಿಗಳವರಿಗೆ** ರಾಜ್ಯ ಸರ್ಕಾರ ಸಂಸ್ಕೃತ ಮತ್ತು ವೇದ ವಿದ್ವಾಂಸರಿಗೆ ನೀಡಿದ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದಕ್ಕಾಗಿ **"ಸಿದ್ಧಗಂಗಾ"** ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.



## ದಾನಿಗಳಿಗೊಂದು ಸದವಕಾಶ

### ಶ್ರೀ ಮಠದ ಸಮಸ್ತ ಭಕ್ತಾದಿಗಳಿಗಾಗಿ

* ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.
* ಮನಿಯಾರ್ಡರು ದ್ವಾರಾ ಕಳುಹಿಸಬಹುದು.
* ಮೊದಲ ಬಾರಿ ಶ್ರೀಗಳವರಿಂದ ಪತ್ರ ಬರುತ್ತದೆ.
* ಪ್ರತಿ ತಿಂಗಳು ಶ್ರೀಗಳವರೇ ಹಣಪಡೆದು ಸಹಿಮಾಡಿದ ಕೂಪನ್ ಬರುತ್ತದೆ.
* ಯಥಾಶಕ್ತಿಕಾಣಿಕೆ ಕಳುಹಿಸುವುದು ಯಾರಿಗೂ ಹೊರೆಯಾಗಲಾರದು.
* ಪ್ರತಿಯೊಬ್ಬರ ಒಂದೊಂದು ಕಾಣಿಕೆಯೂ ಹಲವು ಸಹಸ್ರಗಳೇ ಆಗಿ ಶ್ರೀಗಳವರ ಪುಣ್ಯಕಾರ್ಯಕ್ಕೆ ಸಹಕಾರಿಯಾದೀತು.

### ಪ್ರತಿ ಶತ ಒಂದು ರೂ. ಯೋಜನೆ

(ಶ್ರೀ ಮಠದ ಎಲ್ಲಾ ಹಳೆಯ ವಿದ್ಯಾರ್ಥಿಗಳು ಮತ್ತು ಆ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರಿಗೆ)

* ನಿಮಗೆ ಪ್ರತಿ ಮಾಹೆ ನಿರ್ದಿಷ್ಟ ಆದಾಯ ಉಂಟು.
* ಅದರಲ್ಲಿ ಪ್ರತಿಶತ ಒಂದು ರೂ. (*one peicent*) ಶ್ರೀ ಮಠಕ್ಕೆ ಕಳುಹಿಸಬಹುದು.
* ಒಬ್ಬೊಬ್ಬರೇ ಕಳುಹಿಸಬಹುದು ಅಥವಾ ಹಲವರು ಒಟ್ಟಾಗಿ ಕಳುಹಿಸಬಹುದು.
* ಚೆಕ್, ಡ್ರಾಪ್ಟ್ ಅಥವಾ ಎಂ.ಓ ಕಳುಹಿಸಬಹುದು.
* ಶ್ರೀ ಶ್ರೀಗಳವರ ಹೆಸರಿಗೇ ಕಳುಹಿಸಬೇಕು.
* ಈ ನಿಧಿ ಸತ್ಪಾತ್ರಕ್ಕೆ ಸಲ್ಲುತ್ತದೆ.

ಜೀವನದಲ್ಲಿ ದಾನ ಮಾಡುವವರು ಇಷ್ಟು ಉತ್ಕೃಷ್ಟ ದಾನವನ್ನು ಮಾಡಲು ಹಿಂಜರಿಯಬಾರದು. ಇದಕ್ಕೂ ಶ್ರೇಷ್ಠ ಪಾತ್ರತ್ವ ನಿಮ್ಮ ದಾನಕ್ಕೆ ಅನ್ಯತ್ರ ದೊರೆಯದು, ಇದು ಸುಸಮಯ, ಅಪರೂಪದ ಅವಕಾಶ. ಈ ತಿಂಗಳಿನಿಂದಲೇ ಕಾರ್ಯರೂಪಕ್ಕೆ ತನ್ನಿ. ಇಂದೇ ಕಳಿಸಿರಿ. ಜ್ಞಾನ ದೀವಿಗೆಯಾಗಿ ಶ್ರೀ ಸಿದ್ಧಗಂಗಾ ಮಠ ನಾಡಿಗೆ ಬೆಳಕನ್ನು ಚೆಲ್ಲುತ್ತಿದೆ.

* ಪುಣ್ಯ ಕಾರ್ಯಕ್ಕಾಗಿ ಉದಾರ ನೆರವು ನೀಡಿರಿ.

ಇತಿ,
ಭಕ್ತ ಮಂಡಳಿ.

ತಂತಿ : "ಹ್ಯಾಪಿಮೂನ್"

# ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ

- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ

ತಯಾರಕರು



ಶಿವಪೂಜಾ ಸಾಮಗ್ರಿಗಳು ದೊರೆಯುತ್ತದೆ.




ಫೋನ್ : ಅಂಗಡಿ — 28009 ಮನೆ — 224623.

ವೈ. ಬಸಪ್ಪ, 206, ಅವೆನ್ಯೂ ರೋಡ್, ಬೆಂಗಳೂರು-560 002